# ವಿಚ್ಛೇದನೆ : ಒಂದು ಅಧ್ಯಯನ

(ವಿಚ್ಛೇದಿತ ಮಹಿಳೆಯರನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್)
ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕ
ಅಕಾರಿ ನೇತ್ರಾವತಿ

ಮಾರ್ಗದರ್ಶಕರು
ಡಾ. ಶೈಲಜ ಇಂ. ಹಿರೇಮಠ
ಪ್ರವಾಚಕರು ಮತ್ತು ಮುಖ್ಯಸ್ಥರು
ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೭

# ವಿಚ್ಛೇದನೆ : ಒಂದು ಅಧ್ಯಯನ

(ವಿಚ್ಛೇದಿತ ಮಹಿಳೆಯರನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್)
ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಅಕಾರಿ ನೇತ್ರಾವತಿ

ಮಾರ್ಗದರ್ಶಕರು
ಡಾ. ಶೈಲಜ ಇಂ. ಹಿರೇಮಠ
ಪ್ರವಾಚಕರು ಮತ್ತು ಮುಖ್ಯಸ್ಥರು
ಮಹಿಳಾ ಅಧ್ಯಯನ ವಿಭಾಗ





ಭಾಷಾನಿಕಾಯ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೭

# ಪ್ರಮಾಣ ಪತ್ರ

ವಿಚ್ಛೇದನೆ : ಒಂದು ಅಧ್ಯಯನ (ವಿಚ್ಛೇದಿತ ಮಹಿಳೆಯರನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ಶೈಲಜ ಇಂ. ಹಿರೇಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Netravati

ಸ್ಥಳ : ವಿದ್ಯಾರಣ್ಯ

ದಿನಾಂಕ : 14-08-07

ಅಕಾರಿ ನೇತ್ರಾವತಿ
ಸಂಶೋಧನಾ ವಿದ್ಯಾರ್ಥಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

ಅಕಾರಿ ನೇತ್ರಾವತಿ ಇವರು ವಿಚ್ಛೇದನೆ : ಒಂದು ಅಧ್ಯಯನ (ವಿಚ್ಛೇದಿತ ಮಹಿಳೆಯರನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಳಿಗೆ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ : 14-08-07

ಡಾ. ಶೈಲಜ ಇಂ. ಹಿರೇಮಠ
ಮಾರ್ಗದರ್ಶಕರು
ಪ್ರವಾಚಕರು ಮತ್ತು ಮುಖ್ಯಸ್ಥರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವೈಧಾನಿಕತೆ ಮತ್ತು ಮಹತ್ವ

ವಿವಾಹ ವಿಚ್ಛೇದನೆ ಎನ್ನುವುದು ಯಾವುದೇ ಒಂದು ಪ್ರದೇಶ, ದೇಶಕ್ಕೆ ಸೀಮಿತವಾಗಿರದೆ ವಿಶ್ವವ್ಯಾಪಿ ವಿಷಯವಾಗಿದೆ. ಭಾರತೀಯ ಸಂದರ್ಭದಲ್ಲಿ ವಿಚ್ಛೇದನ ಪ್ರಕ್ರಿಯೆಯು ಆಯಾ ಧರ್ಮದ ಅಡಿಯಲ್ಲಿ ಕಂಡುಬರುತ್ತದೆ. ವಿಚ್ಛೇದನ ಕಾನೂನು ಧರ್ಮಾಧಾರಿತದ ಕಾನೂನಿನಡಿಯಲ್ಲಿ ಬರುವುದರಿಂದ ಆಯಾ ಧರ್ಮದ ವೈಯಕ್ತಿಕ ಕಾನೂನುಗಳು ವಿಚ್ಛೇದನೆಗೆ ಅನ್ವಯಿಸುತ್ತವೆ. ಪಾಶ್ಚಾತ್ಯ ದೇಶಗಳಲ್ಲಿ ಪತಿ/ಪತ್ನಿ ಇಬ್ಬರಲ್ಲಿ ಯಾರಾದರು ಮಲಗಿದ ಸಂದರ್ಭದಲ್ಲಿ ಗೊರಕೆಯೊಡೆಯುತ್ತಾರೆ ಎನ್ನುವ ಕಾರಣಕ್ಕಾಗಿ ಸುಲಭವಾಗಿ ಬೇರೆಯಾಗಬಹುದಾಗಿದೆ. ಆದರೆ ಭಾರತೀಯ ಸಮಾಜದಲ್ಲಿ ವಿಚ್ಛೇದನೆ ಎನ್ನುವುದು ಅಷ್ಟು ಸುಲಭವಾಗಲಾರದು.

ವಿವಾಹ ಎನ್ನುವ ಬಂಧನದಲ್ಲಿ ಒಳಗಾಗಿರುವ ಪತಿ/ಪತ್ನಿಯರ ಮಧ್ಯೆ ವಿಚ್ಛೇದನೆ ಏರ್ಪಡುವುದರಿಂದ ವಿಚ್ಛೇದನೆಯನ್ನು ಅರ್ಥೈಸಿಕೊಳ್ಳುವ ಮೊದಲು ವಿವಾಹವನ್ನು ಅರ್ಥೈಸಿಕೊಳ್ಳಬೇಕಾಗಿದೆ. ಸಮಾಜದ ಎಲ್ಲ ಸಮುದಾಯಗಳಲ್ಲಿ ಕಂಡುಬರುವ ಅತ್ಯಂತ ಪ್ರಾಚೀನ ಸಂಸ್ಥೆಗಳಲ್ಲಿ ಒಂದಾದ ವಿವಾಹ ಸಂಸ್ಥೆಯು ಹೆಣ್ಣನ್ನು ನಿಯಂತ್ರಿಸುವ ಹೆಣ್ಣಿನ ಮೇಲೆ ಪುರುಷರ ಹಕ್ಕನ್ನು ಸ್ಥಾಪಿಸುವಂತಹ ಲಕ್ಷಣಗಳನ್ನು ಮೈಗೂಡಿಸಿಕೊಂಡಿದೆ. ವಿವಾಹ ಸಂದರ್ಭದಲ್ಲಿ ಆಯಾ ಧರ್ಮ ಸಮುದಾಯಕ್ಕೆ ಅನುಗುಣವಾಗಿ ವಿವಾಹ ಪ್ರಕ್ರಿಯೆ ಕಂಡುಬರುತ್ತದೆ. ಕಾಲಚಕ್ರ ಉರುಳಿದಂತೆ ವಿವಾಹ ಸಂದರ್ಭದಲ್ಲಿ ಆಚರಿಸುವ ವಿಧಾನಗಳಲ್ಲಿ ಬದಲಾವಣೆ ಕಂಡುಬಂದರೂ ಪ್ರಾಚೀನ ಕಾಲದಿಂದ ಪ್ರಸ್ತುತ ಕಾಲದವರೆಗೂ ಕುಟುಂಬದಲ್ಲಿ ಪುರುಷನದೇ ಪ್ರಥಮ ಸ್ಥಾನವಿದೆ. ಪುರುಷನಿಗೆ ವಿವಾಹ ಬಂಧನಕ್ಕೆ ಒಳಗಾಗುವ ಸಂಗಾತಿ ಆಯ್ಕೆ ಮಾಡುವ, ವಿವಾಹ ಬಂಧನದಿಂದ ಹೊರಬರುವ, ಪುನರ್ ವಿವಾಹವಾಗುವ ಸ್ವಾತಂತ್ರ್ಯ ಮಹಿಳೆಯರ ಪಾಲಿಗೆ ಇಲ್ಲವಾಗಿದೆ. ಇತ್ತೀಚಿನ ದಿನಗಳಲ್ಲಿ ಆಯ್ಕೆ ಆಧಾರಿತ ವಿವಾಹಗಳ ಸಂಖ್ಯೆ ಹೆಚ್ಚಾಗಿರುವಂಥ ಸಂದರ್ಭದಲ್ಲಿಯೂ ಕುಟುಂಬದಲ್ಲಿ ಪುರುಷ ಪರಮಾಧಿಕಾರವೇ ಕಂಡು ಬರುತ್ತದೆ.

"ಭೂಮಿಯ ಮೇಲೆ ಮಾನವರು ಅಸ್ತಿತ್ವಕ್ಕೆ ಬಂದಾಗ ಬಹುಶಃ ಮದುವೆ ಎಂಬ ಪದ್ಧತಿ ಇರಲಿಲ್ಲವೇನೋ! ಎಲ್ಲಾ ಪುರುಷರೂ ಎಲ್ಲಾ ಸ್ತ್ರೀಯರೂ ಒಟ್ಟಿಗಿದ್ದು ಅವರಿಗೆ ಹುಟ್ಟಿದ ಮಕ್ಕಳು ಆ

ಸಮಾಜದ ಸಮಷ್ಟಿಗೆ ಸೇರಿದ್ದವರಾಗಿರಬೇಕು" (ಮಂಗಳ ಟಿ.ನ., ೧೯೯೦, ಪು. ೫). ಮದುವೆಯ ಕಲ್ಪನೆಯಾಗಲಿ, ವ್ಯವಸ್ಥೆಯಾಗಲಿ ಇಲ್ಲದಂಥ ಜನ ಸಮುದಾಯದಲ್ಲಿ ತನ್ನದ್ದನ್ನು ಗುರುತಿಸಿಕೊಳ್ಳುವಂತಹ ಪ್ರಕ್ರಿಯೆಯು ಮೂಡತೊಡಗಿದ್ದೇ ಖಾಸಗಿ ಆಸ್ತಿಯ ಉಗಮಕ್ಕೆ ಕಾರಣವಾಯಿತು. ಈ ಖಾಸಗಿ ಆಸ್ತಿಯ ಉಗಮವೇ ವಿವಾಹ ಸಂಸ್ಥೆ ಬೆಳಕಿಗೆ ಬರಲು ಕಾರಣವಾಯಿತು. ಹೀಗೆ ಬಂದಂತಹ ವಿವಾಹ ಸಂಸ್ಥೆಯ ವಿಕಸನದ ಹಾದಿಯನ್ನು ಹಿಂತಿರುಗಿ ನೋಡಿದಾಗ ಖಾಸಗಿ ಆಸ್ತಿಗೂ ಮಹಿಳೆಯರ ಸ್ಥಾನಮಾನಕ್ಕೂ ನಿಕಟವಾದ ಸಂಬಂಧವಿರುವುದು ಗೋಚರವಾಗುತ್ತದೆ. ಪುರುಷಪ್ರಧಾನ ಮೌಲ್ಯಗಳು ಖಾಸಗಿ ಆಸ್ತಿಯ ಭದ್ರತೆಗಾಗಿ ಮಹಿಳೆಯರನ್ನು ನಿಯಂತ್ರಣಕ್ಕೊಳಪಡಿಸತೊಡಗಿದವು. ಪಾವಿತ್ರ್ಯದ ಪರಿಕಲ್ಪನೆಯನ್ನು ಹುಟ್ಟುಹಾಕಿ ಅದರ ಜೊತೆಗೆ ಧಾರ್ಮಿಕ, ಸಾಮಾಜಿಕ ಕಟ್ಟುಪಾಡುಗಳನ್ನು ಮಹಿಳೆಯರ ಮೇಲೆ ಹೇರುತ್ತಾ ಮಹಿಳೆಯರ ಬದುಕನ್ನು ಉಸಿರುಗಟ್ಟಿಸುವ ವಾತಾವರಣದಲ್ಲಿ ಇರಿಸಿದ ಪಿತೃಪ್ರಧಾನ ವ್ಯವಸ್ಥೆಯಲ್ಲಿನ ವಿವಾಹ ಸಂಸ್ಥೆಯು ಪುರುಷರಿಗೆ ಹಲವಾರು ಬಗೆಯ ರಿಯಾಯಿತಿಗಳನ್ನು, ಹಕ್ಕುಗಳನ್ನು ಒದಗಿಸಿಕೊಟ್ಟರೆ, ಮಹಿಳೆಯರಿಗೆ ನಿರ್ಬಂಧಗಳನ್ನು ಹೇರುವುದರ ಜೊತೆಗೆ ಅವರ ಬಹುತೇಕ ಹಕ್ಕುಗಳನ್ನು ಕಸಿದುಕೊಳ್ಳುತ್ತದೆ. ವಿವಾಹ ಸಂಸ್ಥೆ ಏರ್ಪಾಡಾಗುವುದೇ ಅಸಮಾನತೆಯ ನೆಲೆಯಲ್ಲಿ, ಇಲ್ಲಿ ತಾರತಮ್ಯಕ್ಕೆ ಒಳಗಾಗುವವಳು ಮಹಿಳೆ. ಅಸಮಾನತೆ ಮೇಲೆ ನಿಂತಿರುವ ವಿವಾಹ ಸಂಸ್ಥೆಯು ಮಹಿಳೆಯರಿಗೆ ಅಲ್ಲಿ ನಿರ್ವಹಿಸಬೇಕಾದ ಕರ್ತವ್ಯ ಮತ್ತು ಬಾಧ್ಯತೆಗಳನ್ನು ತಿಳಿಸುತ್ತದೆ ವಿನಃ ಹಕ್ಕುಗಳನ್ನು ತಿಳಿಸುವುದಿಲ್ಲ.

"ಹೆಣ್ಣಿನ ಬದುಕಿನಲ್ಲಿ ವಿವಾಹವೆನ್ನುವುದು ಮಹತ್ವದ ಬದಲಾವಣೆಗಳನ್ನು ತರುವ ಘಟನೆ. ಹೆಣ್ಣಿನ ಆಸೆ-ಆಕಾಂಕ್ಷೆಗಳ ಕಲಿಕೆ ಸಾಮರ್ಥ್ಯಗಳು ಸೃಜನಶೀಲತೆಯ ಅಳಿವು-ಉಳಿವುಗಳು ಬಹಳಷ್ಟು ಬಾರಿ ವಿವಾಹವನ್ನು ಅವಲಂಬಿಸಿರುತ್ತದೆ. ಹೆಣ್ಣು ಮದುವೆಯಾಗುವುದು ಬರೀ ಗಂಡನನ್ನಲ್ಲ ಅವನ ಇಡೀ ಕುಟುಂಬವನ್ನು. ಅದರೆ ಗಂಡಿನ ಪಾಲಿಗೆ ಇದು ಹಾಗಾಗಬೇಕೆಂದೇನೂ ಇಲ್ಲ. ಬಯಸಲಿ ಬಯಸದಿರಲಿ ವಿವಾಹ ಹೆಣ್ಣಿನ ಪಾಲಿಗೆ ಬಂಧನವಾಗಿಯೇ ಪರಿಣಮಿಸುತ್ತದೆ" (ಗಾಯತ್ರಿ ಎನ್., ೧೯೯೬, ಪು. ೧೩). ನಮ್ಮದು ಪುರುಷಪ್ರಧಾನ ವ್ಯವಸ್ಥೆ, ಹಾಗಾಗಿ ವಿವಾಹದ ನಂತರ ಮಹಿಳೆ ತನ್ನ ಗಂಡನ ಮನೆಯಲ್ಲಿ ವಾಸಿಸಲು ಪ್ರಾರಂಭಿಸುತ್ತಾಳೆ. ಪ್ರಾಚೀನ ರಚನೆಕಾರರು ಸಹ ಪತಿಯ ಮನೆಯನ್ನೇ ಹೆಣ್ಣಿನ ವೈವಾಹಿಕ ಗೃಹವೆಂದು ಪರಿಗಣಿಸಿದ್ದಾರೆ. ವಿವಾಹದ ನಂತರ ಪತಿ ಹಾಗೂ ಮಕ್ಕಳನ್ನು, ಅತ್ತೆ ಮಾವಂದಿರ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಹಾಗೂ ಮಕ್ಕಳನ್ನು ಪಡೆಯುವುದು ಮತ್ತು ಅವರನ್ನು ಬೆಳೆಸುವುದೇ ಮಹಿಳೆಯರ ಮೂಲಭೂತ ಕರ್ತವ್ಯಗಳೆಂದು ನಮ್ಮ ಎಲ್ಲಾ ಹಿಂದಿನ ಸಂಪ್ರದಾಯಗಳು ಹಾಗೂ ರೂಢಿಗತವಾಗಿ ಬಂದ ಆಚರಣೆಗಳು ಹೇಳುತ್ತಾ ಬಂದಿವೆ. ಹೀಗಾಗಿ ಮಹಿಳೆ ತನ್ನ ಜೀವನದಲ್ಲಿ ಎಷ್ಟರಮಟ್ಟಿಗೆ ಯಶಸ್ವಿಯಾಗಿದ್ದಾಳೆಂಬುದು, ಅವಳು ತನ್ನ ಗಂಡನಿಗೆ ಎಷ್ಟರಮಟ್ಟಿಗೆ ತಗ್ಗಿ ಬಗ್ಗಿ ನಡೆಯುತ್ತಾಳೆ? ಪತಿಯ ಮನೆಯಲ್ಲಿ ಎಷ್ಟರಮಟ್ಟಿಗೆ ಹೊಂದಿಕೊಳ್ಳುತ್ತಾಳೆ? ಎಂಬ ಅಂಶಗಳ ಮೇಲೆ ನಿರ್ಧರಿತವಾಗುತ್ತದೆ. 'ವಿವಾಹ' ಎನ್ನುವ ಈ ಸಾಂಸ್ಥಿಕ ವ್ಯವಸ್ಥೆಯಲ್ಲಿನ ನಂಬಿಕೆಯು ಬಹುತೇಕ

ಸಂದರ್ಭದಲ್ಲಿ ಸ್ತ್ರೀ-ಪುರುಷರ ನಡುವೆ ಈಗಾಗಲೇ ಇರುವಂಥ ಅಸಮಾನತೆಯನ್ನು ಮತ್ತಷ್ಟು ಬಲಗೊಳಿಸುವುದರ ಜೊತೆಗೆ ಸ್ತ್ರೀಯರಿಂದಲೇ ವಿಶೇಷವಾದಂಥ ನಡವಳಿಕೆಯನ್ನು ನಿರೀಕ್ಷಿಸುತ್ತದೆ.

ಚರಿತ್ರೆಯುದ್ದಕ್ಕೂ ಕುಟುಂಬ ಮತ್ತು ಸಮಾಜದಲ್ಲಿ ಮಹಿಳೆಯ ಅಸ್ತಿತ್ವವು ವಿವಾಹ, ಸಂತಾನೋತ್ಪತ್ತಿ, ತಾಯ್ತನ, ಪಾತಿವ್ರತ್ಯದಿಂದ ಲೈಂಗಿಕತೆಯ ಸ್ಥಿತಿಯಲ್ಲಿಯೇ ವ್ಯಾಖ್ಯಾನಿತವಾಗಿದೆ. ಪುರುಷ ನಿರ್ಮಿತ ಶಾಸನಗಳಿಂದ ನಿಯಂತ್ರಿತವಾಗಿದೆ. ಗಂಡನಿಗೆ ವಿಧೇಯ ಹೆಂಡತಿಯಾಗಿ, ಕಾಮತೃಪ್ತಿಯ ಸಾಧನವಾಗಿ, ಗಂಡಿನ ನಿರ್ಣಯ, ನಿರೀಕ್ಷೆ, ನಂಬಿಕೆಗಳ ನೇರದಲ್ಲಿ ಕೊರೆದ ಬದುಕಿನ ವೃತ್ತದಲ್ಲಿಯೇ ಜೀವನ ನಿರ್ವಹಿಸುತ್ತಿರುವ ಹೆಚ್ಚಿನ ಸಂಖ್ಯೆಯ ಸ್ತ್ರೀಯರು ಹೊರ ಪ್ರಪಂಚಕ್ಕೆ ಇನ್ನು ಅಪರಿಚಿತವಾಗಿದ್ದಾರೆ. ತಮ್ಮ ಅಂತರಂಗದ ಸಾಮರ್ಥ್ಯ ಸಾಧ್ಯತೆಗಳಿಗೆ ಕುರುಡಾಗಿ ಅಬಲತ್ವದ ಬದುಕನ್ನು ಅಪ್ಪಿಕೊಂಡಿದ್ದಾರೆ. ಇದರಾಚೆಗೆ ಅವಳು ಕಾಲಿಡದಂತೆ ಧರ್ಮಶಾಸ್ತ್ರಗಳ ನಿಷೇಧಿತ ವಲಯಗಳನ್ನು ನಿರ್ಮಿಸಿ ಮನೆಯ ಒಳಗಿನ ಪ್ರಪಂಚವೇ ಅವಳಿಗೆ ಸಹಜ ಸಾಮಾನ್ಯವೆಂದು ನಂಬಿಸಲಾಗಿದೆ. ಅವುಗಳಿಗೆ ಹೊರತಾದ ಅವಳ ಅಪೇಕ್ಷೆಗಳು ಅಪರಾಧವಾಗಿವೆ. ಈ ಪಾಳೆಯಗಾರಿಕೆ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಅತ್ತ ಹುಟ್ಟಿದ ಮನೆಯಲ್ಲೂ ಸ್ಥಾನವಿಲ್ಲದೆ ಇತ್ತ ಗಂಡನ ಮನೆಯಲ್ಲೂ ನೆಲೆಯಿಲ್ಲದೆ ದಿಕ್ಕೇಡಿಯಾಗಿ ಬದುಕು ಸಾಗಿಸುತ್ತಿರುವ ಅಸಂಖ್ಯಾತ ಮಹಿಳೆಯರು ಅಕ್ಷರಶಃ ಪುರುಷರ ಗುಲಾಮರಾಗಿ ಜೀವನ ನಡೆಸುತ್ತಿದ್ದಾರೆ. ಹಾಗೆಂದು ಪ್ರಪಂಚಕ್ಕೆ ಮುಖಾಮುಖಿಯಾಗುತ್ತಿರುವ ಮಹಿಳೆಯರು ಪುರುಷರಿಗೆ ಗುಲಾಮರಾಗಿಲ್ಲವೆಂದಲ್ಲ. ಗುಲಾಮಗಿರಿತನ ಇವರಿಗೂ ತಪ್ಪಿಲ್ಲ. ಈ ಪ್ರಜಾಪ್ರಭುತ್ವ ನಾಡಿನಲ್ಲಿ ಶಾಸನ ಭದ್ರವಾಗಿ ಮಾತ್ರ ಹಕ್ಕುಗಳು ಘೋಷಿಸಲ್ಪಡುತ್ತವೆ. ಆದರೆ ವಾಸ್ತವದಲ್ಲಿ ಪಾಳೆಯಗಾರಿಕೆ ಮೌಲ್ಯಗಳೇ ನಮ್ಮನ್ನಾಳುತ್ತಿವೆ.

ಗಂಡು-ಹೆಣ್ಣಿನ ಮಧುರ ಸಂಬಂಧಗಳು ಪುರುಷ ಪ್ರಧಾನವಾದ ವೈವಾಹಿಕ ಸಂಬಂಧ ಹಾಗೂ ಕೌಟುಂಬಿಕ ರಚನೆಯಲ್ಲಿ ಇಂದು ವ್ಯಾಪಾರಿಕರಣಗೊಳ್ಳುತ್ತಿವೆ. ವರದಕ್ಷಿಣೆಯ ಬೇಡಿಕೆ, ವಧುದಹನ, ಕೌಟುಂಬಿಕ ಹಿಂಸೆ, ಆರ್ಥಿಕ ಕಾರಣಗಳೊಂದಿಗೆ ತಳುಕು ಹಾಕಿಕೊಳ್ಳುವುದರಿಂದ ಅಮಾನುಷವಾದ ಸ್ವರೂಪವನ್ನು ಪಡೆಯುತ್ತಿವೆ. ಪುರುಷಪ್ರಧಾನ ಮೌಲ್ಯಗಳು ಮಹಿಳೆಯರಿಗೆ ವಿವಾಹ ಅನಿವಾರ್ಯವೆಂಬ ಪರಿಕಲ್ಪನೆಯನ್ನು ಹುಟ್ಟುಹಾಕಿವೆ. ಇತರ ಎಲ್ಲಾ ಸಾಮಾಜಿಕ ಸಂಬಂಧಗಳಿಗಿಂತ ವೈವಾಹಿಕ ಸಂಬಂಧವನ್ನು ಸಹಜತೆಗೂ ಮೀರಿ ವೈಭವೀಕರಿಸಲಾಗಿವೆ. ಈ ವೈಭವೀಕರಣ ಮಹಿಳೆಯರಿಗೆ ಅನಿವಾರ್ಯತೆಯನ್ನು ಹುಟ್ಟುಹಾಕಿ ಉಸಿರುಗಟ್ಟಿಸುತ್ತಿವೆ. ವೈಭವೀಕರಣದ ಜೊತೆ ಜೊತೆಗೆ ಪಿತೃಪ್ರಧಾನ ಮೌಲ್ಯಗಳು ಬಲಗೊಳ್ಳುತ್ತಲೇ ಹೋಗುತ್ತದೆ. ಕುಟುಂಬದಲ್ಲಿನ ಗಂಡು-ಹೆಣ್ಣಿನ ಸಂಬಂಧಗಳನ್ನು ಈ ಮೌಲ್ಯಗಳು ನಿರ್ಧರಿಸುತ್ತವೆ. ಈ ಮೌಲ್ಯಗಳ ಅಂತಿಮ ಗುರಿ ಪುರುಷರ ಹಿತಾಸಕ್ತಿಯನ್ನು ಕಾಪಾಡುವುದೇ ಆಗಿದೆ. ಕುಟುಂಬ ಮತ್ತು ವಿವಾಹದ ಚೌಕಟ್ಟಿನಲ್ಲಿ ಮಹಿಳೆಯ ಒಟ್ಟು ಅಸ್ತಿತ್ವವನ್ನು ನಿರಾಕರಿಸಲಾಗಿದೆ. ಈ ಎರಡು ಸಂಸ್ಥೆಗಳಿಗೆ ಹೆಣ್ಣು ಒಂದು ಉಪಕರಣ. ಅದು ವ್ಯವಸ್ಥೆ ನಿಯಂತ್ರಿಸುವ ಯಜಮಾನನ ಇಷ್ಟಕ್ಕೆ ಮಾತ್ರ ಉಪಯೋಗವಾಗುವ ಉಪಕರಣವಾಗಿ ಬಳಕೆಯಾಗಿದ್ದಾಳೆ. ಇಲ್ಲಿ ಅವಳು ತನ್ನ ವೈಯಕ್ತಿಕ

ಬೇಕು, ಬೇಡುಗಳನ್ನು ಬದಿಗೊತ್ತಿ ಇಡೀ ಕುಟುಂಬದ ಸಂರಕ್ಷಣೆಗೆ ಮುಂದಾಗಬೇಕು. ಕುಟುಂಬದ ಹಿತಚಿಂತನೆಯ ಸಂದರ್ಭದಲ್ಲಿ ಅವಳು ಎಲ್ಲಾ ತ್ಯಾಗಕ್ಕೂ ಮತ್ತು ಬಲಿಗೂ ಸಿದ್ಧಳಾಗಬೇಕು. ಈ ರೀತಿ ತ್ಯಾಗ ಮತ್ತು ಬಲಿದಾನದ ವೈಭವೀಕರಣ ಅವಳನ್ನು ಉಚ್ಚ ಸ್ಥರಕ್ಕೇರಿಸುವ ಕುತಂತ್ರವಾಗಿವೆ. ವಿಧೇಯತೆ, ವಿನಯಶೀಲತೆ, ತ್ಯಾಗ, ಕ್ಷಮೆ, ಸಂಯಮ ತಾಳ್ಮೆಯೆಂಬ ಪ್ರತಿಭಟನಾರಹಿತ ಮೌಲ್ಯಗಳನ್ನು ಆಕೆಯಲ್ಲಿ ಬಿತ್ತಿರುವ ಫಲಿತಾಂಶವಾಗಿದೆ. ಇಂದು ಅನೇಕ ಮಹಿಳೆಯರು ವಿವಾಹ ಸಂಸ್ಥೆಯಡಿಯಲ್ಲಿ ವಧುದಹನ, ವರದಕ್ಷಣೆ ಸಾವು, ಆತ್ಮಹತ್ಯೆಯಂತಹ ಅಸಹಜ ಸಾವುಗಳಿಗೆ ಈಡಾಗುತ್ತಿರುವರು.

ಹೆಣ್ಣಿನ ಭವಿಷ್ಯವನ್ನು ಮದುವೆಯೊಂದಿಗೆ ಬೆಸೆದು ಬಿಟ್ಟಿರುವ ನಮ್ಮ ಸಂಸ್ಕೃತಿಯಲ್ಲಿ ಮದುವೆ ಇಲ್ಲದ ಹೆಣ್ಣನ್ನು ಅವಳ ಅಸ್ತಿತ್ವವನ್ನು ಊಹಿಸಿಕೊಳ್ಳುವುದು ಮತ್ತು ಒಪ್ಪಿಕೊಳ್ಳುವುದು ಕಷ್ಟ. ಅಂತಸ್ತಿಗೆ ತಕ್ಕಂತೆ ವರದಕ್ಷಿಣೆ, ವರೋಪಚಾರಗಳು ನಡೆದರೂ ಗಂಡಿನ ಹಣದ ದುರಾಸೆ ಹಲವಾರು ಹೆಣ್ಣು ಮಕ್ಕಳನ್ನು ಸಾವಿಗೆ ದೂಡಿದೆ. ಪುರುಷಪ್ರಧಾನ ಸಮಾಜದಲ್ಲಿ ಹೆಣ್ಣಿಗೆ ವಿದ್ಯೆ, ಉದ್ಯೋಗಕ್ಕಿಂತಲೂ 'ಮದುವೆ'ಯೇ ಅನಿವಾರ್ಯ ಎಂಬುದನ್ನು ಆಕೆಗೆ ಬಾಲ್ಯದಿಂದಲೇ ತರಬೇತಿ ನೀಡಲಾಗುತ್ತದೆ. ಬಾಲ್ಯದಿಂದಲೇ ಮಹಿಳೆಯರಿಗೆ ಪತಿಯೇ ಪರದೈವ. ಪಾಲಿಗೆ ಬಂದದ್ದು ಪಂಚಾಮೃತ ಎಂಬ ಅನಿಷ್ಟ ವಿಚಾರಗಳ ಕುರಿತು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಒಪ್ಪಿಕೊಳ್ಳುವಂತೆ ಮಾಡಲಾಗುತ್ತದೆ. ಅದರಿಂದಾಗಿ ಅವಳು ಪತಿಯ ಇಚ್ಛೆಯನರಿತು ನಡೆಯುವ ಪತ್ನಿಯಾಗಿದ್ದಾಳೆ. ಪತಿಯನ್ನು ಎದುರಿಸುವ, ಆತ ಮಾಡುವ ಯಾವುದೇ ಕಾರ್ಯವನ್ನು ಏನು, ಏಕೆ ಎಂದು ಪ್ರಶ್ನಿಸುವ ಮನೋಧೈರ್ಯವು ಅವಳಿಗಿರಲಿಲ್ಲ. ಆದರೆ ಕಾಲಚಕ್ರ ಉರುಳಿದಂತೆ ಮಹಿಳೆಯರಲ್ಲಿ ಈ ಭಾವನೆ ಕಡಿಮೆಯಾಗುತ್ತಿರುವುದು ಮಹತ್ವದ ಸಂಗತಿಯಾಗಿದೆ. ಗಂಡನ ದಬ್ಬಾಳಿಕೆಯನ್ನು ಸಹಿಸಿಕೊಂಡು ಸುಮ್ಮನೆ ಕೂಡುವ ಮಹಿಳೆಯರ ಸಂಖ್ಯೆ ದಿನದಿನಕ್ಕೆ ಕಡಿಮೆಯಾಗುತ್ತಲಿದೆ.

ನಾಲ್ಕು ಗೋಡೆಯ ಮಧ್ಯೆಯೇ ಮಹಿಳೆಯರ ಜೀವನ ಎನ್ನುವ ಸಮಾಜದ ಮನೋಭಾವ ದೃಷ್ಟಿಕೋನ, ಜೀವನ ಶೈಲಿ ಎಲ್ಲವೂ ತೀವ್ರಬದಲಾವಣೆಯನ್ನು ಕಂಡಿವೆ. ಭಾರತದ ಸಂದರ್ಭದಲ್ಲಿ ಬ್ರಿಟೀಷ್ ಆಗಮನ ನಂತರ ಬ್ರಿಟಿಷರ ಹಾಗೂ ಸಮಾಜ ಸುಧಾರಕರ ಪ್ರಯತ್ನದಿಂದಾಗಿ ಭಾರತೀಯ ಮಹಿಳೆಯರಿಗೆ ಶಿಕ್ಷಣದ ಬಾಗಿಲು ತೆರೆದುಕೊಂಡಿತು ಹಾಗೂ ಖಾಸಗೀ ಜೀವನದಿಂದ ಸಾರ್ವಜನಿಕ ಜೀವನಕ್ಕೆ ಮಹಿಳೆಯರು ಪ್ರವೇಶಿಸುವುದಕ್ಕೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಾರಣವಾಯಿತು. ಪ್ರಮುಖ ಹಿಂದೂ ಕುಟುಂಬಗಳ ಹೆಣ್ಣು ಮಕ್ಕಳು ಸಂಪ್ರದಾಯಬದ್ಧ ಜೀವನ ಕ್ರಮದಿಂದ ಹೊರಬಂದು ತಮಗೆ ದೊರೆತ ಹೊಸ ಅವಕಾಶಗಳನ್ನು ಬಳಸಿಕೊಳ್ಳಲಾರಂಭಿಸಿದರು. ರಾಜಕಾರಣಿಗಳು ಹಾಗೂ ಸಮಾಜ ಸುಧಾರಕರು ರಾಜಕೀಯ ಪ್ರಕ್ರಿಯೆಯಲ್ಲಿ ಭಾಗವಹಿಸುವಂತೆ, ಸಮಾಜ ಸುಧಾರಣಾ ಚಳುವಳಿಗಳನ್ನು ಸಂಘಟಿಸುವಂತೆ ಮತ್ತು ಸಾರ್ವಜನಿಕ ಜೀವನದಲ್ಲಿ ತೀರ್ಮಾನ ಕೈಗೊಳ್ಳುವ ಪಾತ್ರವಹಿಸುವಂತೆ ಮಹಿಳೆಯರಿಗೆ ಪ್ರೋತ್ಸಾಹ ನೀಡಿದರು. ಮಹಿಳೆಯರು ರಾಷ್ಟ್ರೀಯ ಚಳುವಳಿಗೆ ಧುಮುಕಿ ಅನೇಕ ಸಭೆಗಳಲ್ಲಿ ಭಾಗವಹಿಸಿ ಮುಕ್ತ ವಾತಾವರಣಕ್ಕೆ ತಮ್ಮನ್ನು ತಾವೇ ತೆರೆದುಕೊಂಡರು. ಹೀಗೆ ದೊರೆತ ಮುಕ್ತ

ವಾತಾವರಣದ ಪ್ರತಿಫಲವಾಗಿ ಇಂದು ಮಹಿಳೆ ಹಲವು ಕ್ಷೇತ್ರಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಾಳೆ. ಹಲವು ಕ್ಷೇತ್ರಗಳಲ್ಲಿ ಮಹಿಳೆ ಕಾಣಿಸಿಕೊಳ್ಳುತ್ತಿದ್ದಾಳೆ ಎಂದ ಮಾತ್ರಕ್ಕೆ, ಮಹಿಳೆ ಸಮಾಜದಲ್ಲಿ ಅಸಮಾನತೆಗೆ ಒಳಗಾಗುತ್ತಿಲ್ಲ ಎಂದು ಹೇಳಲಾಗದು. ಮಹಿಳೆಯರಲ್ಲಿ ಬದಲಾವಣೆ ಕಾಣಬಹುದು. ಆದರೆ ಸಮಾಜದಲ್ಲಿ ಬದಲಾವಣೆಯಾಗದ ಹೊರತು ಸ್ತ್ರೀ-ಪುರುಷರ ನಡುವಿನ ಅಸಮಾನತೆ ಬದಲಾಗದು. ಸ್ತ್ರೀ-ಪುರುಷರ ನಡುವಿನ ಅಸಮಾನತೆ ಎಂದಾಗ ಅದು ಸ್ತ್ರೀಯರಿಗೆ ವಿರುದ್ಧವಾದ ಅಸಮಾನತೆ ಆಗಿರುತ್ತದೆ. ಸಮಾಜದಲ್ಲಿ ಬೇರೂರಿರುವ ಪುರುಷಪ್ರಧಾನ ಮೌಲ್ಯಗಳು ಮಹಿಳೆಯರನ್ನು ಎರಡನೆಯ ದರ್ಜೆಯ ಪ್ರಜೆ ಎಂದು ಭಾವನೆ ಅವಳಿಂದ ತನಗೆ ಬೇಕಾದಂಥ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತವೆ ವಿನಃ ಅವಳಿಗೆ ದೊರೆಯಬೇಕಾದ ಹಕ್ಕುಗಳ ಬಗ್ಗೆ ತಿಳಿಸುವುದಿಲ್ಲ.

ಸಾಂಪ್ರದಾಯವಾದಿಗಳ ಪ್ರಕಾರ ವಿಚ್ಛೇದನೆ ಅಹಿತಕರವಾದ ಸಂಗತಿಯಾಗಿದೆ. ಅದರಲ್ಲೂ ಮಹಿಳೆ ವಿಚ್ಛೇದನೆ ಬಯಸುವದು ಪಾಪದ ಕೆಲಸ ಎಂದು ಅವರ ಭಾವನೆ. ೧೯೫೫ರಲ್ಲಿ ಸಾಂಪ್ರದಾಯಗಳ ವಿರೋಧದ ಮಧ್ಯೆಯು ಹಿಂದೂ ವಿವಾಹ ಕಾಯ್ದೆಯಡಿ ಹಿಂಸಿಸುವ ಗಂಡನಿಂದ ಮಹಿಳೆಯರು ವಿಚ್ಛೇದನೆ ಪಡೆಯುವ ಅವಕಾಶ ನೀಡಲಾಯಿತು. ಪಾಶ್ಚಾತ್ಯ ಸಂಸ್ಕೃತಿಯಲ್ಲಿ ಸಂಸಾರಗಳು ಒಡೆದು ನಿಲ್ಲುವ ಸಂದರ್ಭಗಳು ಹೆಚ್ಚು ಕಂಡುಬರುತ್ತವೆಂಬ ಮಾತಿವೆ. ಆದರೆ ನಮ್ಮ ವಿವಾಹಗಳು ಈವರೆಗೂ ಏಕಾಏಕಿ ಮುರಿದು ಬೀಳುತ್ತಿರಲಿಲ್ಲ. ನಿಜ ಹೇಳಬೇಕೆಂದರೆ ಹಾಗೆ ಮುರಿದು ಹೋಯಿತೆಂದು ಬಹಿರಂಗವಾಗಿ ಹೇಳಿಕೊಳ್ಳಲು ಈಗಲೂ ನಮ್ಮ ಹೆಣ್ಣುಮಕ್ಕಳೂ ಹಿಂಜರಿಯುವಂಥ ಸ್ಥಿತಿ ನಮ್ಮ ಸಮಾಜದಲ್ಲಿದೆ. ಹಿಂಸಿಸುವ ಗಂಡನನ್ನು ದೇವರೆಂದು ಪೂಜಿಸಬೇಕು ಎಂಬ ನಿಯಮವನ್ನು ಸಾರುವ ಸಾಂಪ್ರದಾಯಿಕ ಮನೋಭಾವದವರು ಇಂದಿಗೂ ಅನೇಕ ಜನರಿದ್ದಾರೆ.

ಕಾನೂನು ಕಲ್ಪಿಸಿದ ಅವಕಾಶದಿಂದ ಇಂದು ಮಹಿಳೆಯರು ವಿಚ್ಛೇದನೆಯನ್ನು ಪಡೆಯುವಲ್ಲಿ ಮುಂದಾಗುತ್ತಿರುವುದು ಸರ್ವವಿಧಿತ. ಭಾರತ ಸಂವಿಧಾನವು ಕಾನೂನಿನಡಿ ಇಂದು "ವಿಚ್ಛೇದನೆ"ಗೆ ಅವಕಾಶ ಕಲ್ಪಿಸಿದೆಯಾದರೂ ಕೆಲವರು ವಿವಾಹದಿಂದ ಸಮಸ್ಯೆ ಏರ್ಪಾಟ್ಟಾಗ ಬಿಡುಗಡೆಯಾಗಬೇಕೆಂಬ ಪ್ರಸ್ತಾವ ತಲೆದೋರಿದಾಗ ಕಾನೂನಿನ ಮೊರೆ ಹೋಗದೇ ಪಂಚಾಯ್ತಿ ಮಾಡುವ ಮೂಲಕ ವಿವಾಹ ಬಂಧನದಿಂದ ಹೊರಬರುವಂಥದ್ದು ಕಂಡು ಬರುತ್ತದೆ. ಈ ಬಗೆಯಲ್ಲಿ ವಿವಾಹ ಬಂಧನದಿಂದ ಹೊರಬರುವಂಥ ಪ್ರಕ್ರಿಯೆಯನ್ನು 'ಪಂಚಾಯ್ತಿಯಡಿ ವಿಚ್ಛೇದನೆ' ಎಂದು ಕರೆಯಬಹುದು.

ವಿಚ್ಛೇದನೆ ಪಡೆಯುತ್ತಿರುವ ಮಹಿಳೆಯರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುವುದು ಕಂಡು ಬರುತ್ತಲಿದೆ. ದಿನದಿಂದ ದಿನಕ್ಕೆ ವಿಚ್ಛೇದನೆ ಪ್ರಕ್ರಿಯೆಯಲ್ಲಿ ಮಹಿಳೆಯರು ಕಂಡು ಬರುವಂತಹ ಪರಿಸ್ಥಿತಿಯನ್ನು ನಿರ್ಮಿಸುತ್ತಿರುವ ಕಾರಣಗಳಾದರೂ ಯಾವುವು? ವಿಚ್ಛೇದನೆ ಪಡೆದ ನಂತರದಲ್ಲಿ ಮಹಿಳೆಯ ಸ್ಥಿತಿ ಯಾವ ಬಗೆಯಲ್ಲಿರುವುದು? ವಿಚ್ಛೇದನ ಕಾಯ್ದೆ ಒಳಗೊಂಡಿರುವಂತಹ ಅಂಶಗಳಾವುವು ಎಂಬುದನ್ನೆಲ್ಲ ತಿಳಿದುಕೊಳ್ಳುವ ಉದ್ದೇಶದಿಂದ ಈ ಅಧ್ಯಯನವನ್ನು ಹಿಂದೂ ಧರ್ಮಕ್ಕೆ ಅನ್ವಯವಾಗುವ ಹಿಂದೂ ವಿವಾಹ ಕಾಯ್ದೆಗೆ ಸೀಮಿತಗೊಳಿಸಲಾಗಿದೆ.

**ಉದ್ದೇಶಗಳು**

- ಪುರುಷಪ್ರಧಾನ ವ್ಯವಸ್ಥೆಯಲ್ಲಿ ರೂಪುಗೊಂಡಿರುವಂಥ ವಿವಾಹ ಸಂಸ್ಥೆಯು ಮಹಿಳೆಯ ಬದುಕನ್ನು ಯಾವ ನೆಲೆಯಲ್ಲಿ ಕಟ್ಟಿಕೊಟ್ಟಿದೆಂದು ತಿಳಿಯುವುದು.
- ಪ್ರಾಚೀನ ಗ್ರಂಥಗಳಲ್ಲಿ ವಿವಾಹ ವಿಚ್ಛೇದನೆಯ ಆಲೋಚನೆಗಳು.
- ವಿಚ್ಛೇದನೆ ಪಡೆಯಲು ಬಯಸುವ ಮಹಿಳೆಯರು ವಿವಾಹ ಸಂಸ್ಥೆಯಿಂದ ವಿಚ್ಛೇದನೆ ಪಡೆಯಲು ಬಯಸುತ್ತಿರುವರೆ ಅಥವಾ ಹಿಂಸಿಸುವ ಗಂಡನಿಂದ ವಿಚ್ಛೇದನೆ ಬಯಸುತ್ತಿರುವರೆ.
- ವಿಚ್ಛೇದನೆ ಪಡೆದ ನಂತರದ ಮಹಿಳೆಯರ ಬದುಕು ಯಾವ ರೀತಿಯಲ್ಲಿದೆ?

**ವ್ಯಾಪ್ತಿ**

ರಾಜ್ಯದ ಹೈದರಾಬಾದ್ - ಕರ್ನಾಟಕ ಪ್ರದೇಶವು ಹಿಂದುಳಿದ ಪ್ರದೇಶವೆಂಬ ಹಣೆಪಟ್ಟಿಯನ್ನು ಹೊಂದಿದೆ. ಸಂಪನ್ಮೂಲಗಳಿದ್ದರೂ ಸರಿಯಾದ ರೀತಿಯಲ್ಲಿ ಬಳಕೆಯಾಗದೇ ಅಭಿವೃದ್ಧಿಯಲ್ಲಿ ಹಿಂದೆ ಬಿದ್ದಿದೆ. ಶೈಕ್ಷಣಿಕವಾಗಿ, ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಹಿಂದುಳಿದಿರುವುದು ಅನೇಕ ಸಾಮಾಜಿಕ ಸಮಸ್ಯೆಗಳಿಗೆ ಕಾರಣಗಳಾಗಿವೆ. ಪ್ರಸ್ತುತ ಅಧ್ಯಯನದಲ್ಲಿ ಈ ಪ್ರದೇಶದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕನ್ನು ವ್ಯಾಪ್ತಿಯನ್ನಾಗಿ ಆಯ್ದುಕೊಳ್ಳಲಾಗಿದೆ. ಹೊಸಪೇಟೆ ತಾಲೂಕು ಗಣಿ ಉದ್ಯಮಕ್ಕೆ ಹಾಗೂ ಐತಿಹಾಸಿಕ ರಾಜಧಾನಿಯಾದ ವಿಜಯನಗರಕ್ಕೆ ಪ್ರಸಿದ್ಧಿ ಪಡೆದಿದೆ. ತಾಲೂಕಿನ ಬಹುಸಂಖ್ಯಾತ ಕೂಲಿ-ಕಾರ್ಮಿಕರು ತಾಲೂಕಿನ ಗಣಿ ಕೆಲಸದಲ್ಲಿದ್ದು ಅನೇಕ ಪ್ರತ್ಯಕ್ಷ ಪರೋಕ್ಷ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ಅಂಶಗಳು ವಿವಾಹ ವಿಚ್ಛೇದನೆಗಾಗಿನೇ ಪೂರಕ ಮಾಹಿತಿಗಳಾಗಿವೆ.

**ಸ್ವರೂಪ**

ಜಗತ್ತಿನ ಬಹುತೇಕ ದೇಶಗಳಲ್ಲಿ ಕಾಣುವಂತೆ ಭಾರತದಲ್ಲಿಯೂ ವಿವಾಹ ವಿಚ್ಛೇದನೆ ಪ್ರಕರಣಗಳನ್ನು ಕಾಣುತ್ತೇವೆ. ಪ್ರಸ್ತುತ ಈ ಅಧ್ಯಯನವು ಏಳು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೆಯ ಅಧ್ಯಾಯದಲ್ಲಿ ವಿಷಯದ ಆಯ್ಕೆಗೆ ಸಂಬಂಧಿಸಿದಂತೆ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ವೈಧಾನಿಕತೆ ಮತ್ತು ಮಹತ್ವದ ಕುರಿತು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಪ್ರಾಚೀನ ಗ್ರಂಥಗಳಲ್ಲಿ ವಿಚ್ಛೇದನೆ ಕುರಿತ ಆಲೋಚನೆ ಯಾವ ಬಗೆಯಲ್ಲಿದೆನ್ನುವುದನ್ನು ತಿಳಿಯಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಮಹಿಳೆಯರನ್ನು ಅನುಲಕ್ಷಿಸಿ, ವಿವಾಹ ವಿಚ್ಛೇದನೆಗೆ ಕಾರಣಗಳಾವುವು? ಅದರಲ್ಲೂ ಯಾವ ಕಾರಣಗಳಿಂದ ಇಂದು ಮಹಿಳೆಯರು ವಿಚ್ಛೇದನೆ ಪ್ರಕ್ರಿಯೆಯಲ್ಲಿ ತೊಡಗಿದ್ದಾರೆ. ಅವರ ಯಾವ ಬಗೆಯ ಸಮಸ್ಯೆಗಳು ವಿಚ್ಛೇದನೆ ಪಡೆಯಲು ಕಾರಣವಾಗಿವೆ ಎನ್ನುವುದನ್ನು ತಿಳಿಯಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ವಿಚ್ಛೇದನೆ ಪ್ರಕ್ರಿಯೆಯಲ್ಲಿ ತೊಡಗಿರುವಂಥ ಮಹಿಳೆಯರ ವಿಚ್ಛೇದನದ ಅಪೇಕ್ಷಣೀಯ ನೆಲೆಗಳು ಯಾವ ಬಗೆಯಲ್ಲಿ ಕಂಡು ಬರುತ್ತದೆ ಎನ್ನುವುದನ್ನು ತಿಳಿಯಲಾಗಿದೆ.

ಐದನೆಯ ಅಧ್ಯಾಯದಲ್ಲಿ "ಹಿಂದೂ ವಿವಾಹ ಕಾಯ್ದೆ"ಯು ವಿಚ್ಛೇದನೆಯ ಕುರಿತು ಏನು ಹೇಳುತ್ತದೆ ಎನ್ನುವುದನ್ನು ತಿಳಿಯಲಾಗಿದೆ.

ಆರನೆಯ ಅಧ್ಯಾಯದಲ್ಲಿ ವಿಚ್ಛೇದನೆ ಪ್ರಕ್ರಿಯೆಯಲ್ಲಿ ಕಂಡು ಬರುತ್ತಿರುವ ಮಹಿಳೆಯರ ವಿಚ್ಛೇದನೆ ನಂತರದ ಬದುಕು ಯಾವ ಬಗೆಯಲ್ಲಿದೆ ಎನ್ನುವುದನ್ನು ತಿಳಿಯಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಅಧ್ಯಯನದಿಂದ ಕಂಡುಕೊಂಡ ಅಂಶಗಳಿವೆ.

**ವೈಧಾನಿಕತೆ**

ಅಧ್ಯಯನವು ಕ್ಷೇತ್ರಕಾರ್ಯ (Primary Sources)ದ ಮಾಹಿತಿಗಳನ್ನು ಆಧಾರವಾಗಿಸಿಕೊಂಡಿದೆ. ಹೊಸಪೇಟೆ ತಾಲೂಕಿನಲ್ಲಿನ ವಿವಾಹ ವಿಚ್ಛೇದನಾ ಪ್ರಕ್ರಿಯೆಯಲ್ಲಿ ಒಳಗೊಂಡಿರುವ ಮಹಿಳೆಯರನ್ನು ಸಂದರ್ಶಿಸಿ ಪೂರಕ ಮಾಹಿತಿಗಳನ್ನು ಪಡೆಯಲಾಗಿದೆ. ಅಧ್ಯಯನಕ್ಕೆ ಪೂರಕವಾದ ಒಂದು ಪ್ರಶ್ನಾವಳಿಯನ್ನು ಮಹಿಳೆಯರ ಮುಂದಿಟ್ಟು ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ವಿಚ್ಛೇದನಾ ಪ್ರಕರಣಗಳು ವಕಾಲತ್ತು ನಡೆಸಿದ, ನಡೆಸುತ್ತಿರುವ ವಕೀಲರನ್ನು ಕೂಡ ಸಂದರ್ಶಿಸಿ ಮಾಹಿತಿಗಳನ್ನು ಪಡೆಯಲಾಗಿದೆ. ವಿವಾಹ ವಿಚ್ಛೇದನೆಯ ಪ್ರಕರಣಗಳಲ್ಲಿ ಪತಿ-ಪತ್ನಿ ಇಬ್ಬರು ಒಪ್ಪಂದದ ಮೇರೆಗೆ ದಾವೆ ದಾಖಲಿಸಿ ವಿಚ್ಛೇದನೆ ಪಡೆಯಬಹುದು ಅಥವಾ ಪತ್ನಿ-ಪತಿಯ ವಿರುದ್ಧ ದಾವೆ ದಾಖಲಿಸಿ ವಿಚ್ಛೇದನೆ ಪಡೆಯಬಹುದು. ಅಂತೆಯೇ ಪತಿ-ಪತ್ನಿಯ ವಿರುದ್ಧ ದಾವೆ ದಾಖಲಿಸಿ ವಿಚ್ಛೇದನೆ ಪಡೆಯಬಹುದು. ಈ ನನ್ನ ಅಧ್ಯಯನದಲ್ಲಿ ಪತಿಯ ವಿರುದ್ಧ ದಾವೆ ದಾಖಲಿಸಿದ ಪತ್ನಿಯರ ಪ್ರಕರಣಗಳನ್ನು ಪರಿಗಣಿಸಿದ್ದೇನೆ. ಅಲ್ಲದೇ ಕಾನೂನಿನ ಮೋರೆ ಹೋಗದೇ ಪಂಚಾಯ್ತಿ ಮಾಡುವ ಮೂಲಕ ವಿವಾಹ ಬಂಧನದಿಂದ ಹೊರಬಂದು ಜೀವನ ನಡೆಸುತ್ತಿರುವ ಮಹಿಳೆಯರನ್ನು ಇಲ್ಲಿ ಪರಿಗಣಿಸಲಾಗಿದೆ. ಒಂದು ಸಾರಿ ವಿಚ್ಛೇದನೆ ಪಡೆದು ನಂತರ ಮರುವಿವಾಹದ ಪ್ರಕರಣಗಳೂ ತಾಲೂಕಿನಲ್ಲಿ ಕಂಡು ಬರುತ್ತವೆ. ಅಂತಹ ಪ್ರಕರಣಗಳನ್ನು ಅಧ್ಯಯನದ ವ್ಯಾಪ್ತಿಯಿಂದ ಹೊರತುಪಡಿಸಿದ್ದೇನೆ.

**ಮಹತ್ವ**

ಅನಾದಿಕಾಲದಿಂದಲೂ ಸಮಾಜದಲ್ಲಿ ಎರಡನೆಯ ದರ್ಜೆಯ ಪ್ರಜೆಯಾಗಿ ಬದುಕುತ್ತಿರುವ ಮಹಿಳೆಯರು ಪುರುಷಪ್ರಧಾನ ಸಮಾಜದಲ್ಲಿ ಶೋಷಣೆಗೆ ಒಳಗಾಗುತ್ತಲೇ ಬಂದಿದ್ದಾರೆ. ವಿವಾಹವೆನ್ನುವುದು ಸ್ತ್ರೀ-ಪುರುಷರ ಬದುಕಿನ ಒಂದು ಪ್ರಮುಖ ಘಟ್ಟ. ಈ ಸಂಸ್ಕಾರಕ್ಕೆ ಒಳಗಾಗದ ಹೊರತು ಮಹಿಳೆಗೆ ಮುಕ್ತಿ ಇಲ್ಲವೆಂದು ನಮ್ಮ ಸಮಾಜ ತಿಳಿಸುತ್ತದೆ. ಅನಿವಾರ್ಯ ಕಾರಣಗಳಿಗಾಗಿ ವಿವಾಹವಾಗದೆ ಇರುವ

ಮಹಿಳೆಯರನ್ನು ಕಾಣಬಹುದು, ಇಷ್ಟಪಟ್ಟು ವಿವಾಹವಾಗದೆ ಹಾಗೆ ಉಳಿಯುವ ಮಹಿಳೆಯರ ಸಂಖ್ಯೆ ತೀರ ಕಡಿಮೆ. ಪುರುಷರು ವಿವಾಹವಾಗದೆ ಉಳಿಯಬಹುದು ಅಥವಾ ಸನ್ಯಾಸವನ್ನು ಸ್ವೀಕರಿಸಬಹುದು. ಇವರಿಗೆ ಯಾರು ಏನು ಅನ್ನುವುದಿಲ್ಲ. ಆದರೆ ಮಹಿಳೆ ಇಂತಹ ನಿರ್ಣಯವನ್ನು ತೆಗೆದುಕೊಳ್ಳುವುದು 'ಹಿಂದೂ' ಸಮಾಜದಲ್ಲಿ ಪಾಪದ ಕೆಲಸವೇ ಆಗುತ್ತದೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಸಿಲುಕಿ ನಲುಗುತ್ತಿರುವ ಮಹಿಳೆಯರ ಬಾಳು ನಿತ್ಯಗೋಳಾಗಿದೆ. ಶತಶತಮಾನಗಳಿಂದಲೂ ತುಳಿತಕ್ಕೆ ಒಳಗಾದ ಮಹಿಳೆ ಪರರಿಗಾಗಿಯೇ ಬದುಕುವ ರೀತಿಯು ಪ್ರಸ್ತುತ ಸಂದರ್ಭದಲ್ಲಿಯೂ ಕಂಡು ಬರುತ್ತದೆ. ವಿವಾಹ ಸಂಸ್ಥೆಯಲ್ಲಿ ಮಹಿಳೆ ಅನುಭವಿಸುವ ಹಿಂಸೆ ನಿನ್ನೆ ಮೊನ್ನೆಯದಲ್ಲ. ವಿವಾಹ ಸಂಸ್ಥೆ ಎಂದು ಅಸ್ತಿತ್ವಕ್ಕೆ ಬಂದಿತೋ ಅಂದಿನಿಂದಲೇ ಮಹಿಳೆ ತುಳಿತಕ್ಕೆ ಒಳಗಾಗಿದ್ದಾಳೆ. ಶೋಷಣೆಯಿಂದ ಹೊರಬರುವುದಕ್ಕೆ ಶತಶತಮಾನಗಳೇ ಬೇಕಾಯಿತು. ಯಾವುದು ತನ್ನ ಕರ್ತವ್ಯ, ಯಾವುದು ತನ್ನ ಸರ್ವಸ್ವವೆಂದು ಇದರಾಚೆ ನನ್ನ ಜೀವನವೇ ಇಲ್ಲ ಎಂದು ಭಾವಿಸಿದ್ದಳೋ ಅದೇ ನನ್ನ ನಿಜವಾದ ಅಸ್ತಿತ್ವವನ್ನು ಮರೆಮಾಚಿಸಿದವು ಎನ್ನುವುದನ್ನು ತಿಳಿಯುವಲ್ಲಿ ವಿಳಂಬವಾಯಿತಾದರೂ, ಯಾವುದನ್ನು ನನ್ನದು ಎಂದು ಒಪ್ಪಿಕೊಂಡು ನಡೆಯುತ್ತಿದ್ದಳೋ ಅದೇ ನನ್ನ ಎಲ್ಲ ಸಮಸ್ಯೆಗೆ ಮೂಲಕಾರಣ ಎಂದು ಅರಿಯತೊಡಗಿದಳು. ತನ್ನ ವ್ಯಕ್ತಿತ್ವವನ್ನು ನಾಲ್ಕು ಗೋಡೆಗಳ ಮಧ್ಯೆ ಬಂಧಿಸಿ ಅದೇ ನನ್ನ ಪ್ರಪಂಚ ಎಂದು ತಿಳಿಸಿಕೊಡುತ್ತಾ ಬಂದಿರುವ ಸಮಾಜದ ವಿರುದ್ಧ ಎದ್ದು ನಿಲ್ಲುವ ಧೈರ್ಯವನ್ನು ಬೆಳೆಸಿಕೊಳ್ಳಲಾರಂಭಿಸಿದಳು. ವಿವಾಹ ಸಂಸ್ಥೆಯಲ್ಲಿ ಒಳಗಾಗುವ ಹಿಂಸೆಗಳಿಂದ ಮುಕ್ತಿ ಹೊಂದುವುದಕ್ಕಾಗಿ ವಿಚ್ಛೇದನೆಯಂಥ ಪ್ರಕ್ರಿಯೆಯಲ್ಲಿ ಪಾಲ್ಗೊಂಡಳು.

ವಿಚ್ಛೇದನೆ ಪಡೆಯುತ್ತಿರುವ ಮಹಿಳೆಯರ ಸಂಖ್ಯೆ ದಿನ ದಿನೇ ಹೆಚ್ಚಾಗುತ್ತಲಿದೆ. ಇದಕ್ಕೆ ಕಾರಣ ವೈವಾಹಿಕ ಸಂಸ್ಥೆಯಿಂದಾಗಿ ಆಕೆ ಎದುರಿಸುತ್ತಿರುವ ಸಮಸ್ಯೆಗಳು. 'ವಿಚ್ಛೇದನೆ'ಯಲ್ಲಿ ಸ್ತ್ರೀ-ಪುರುಷ ಇಬ್ಬರೂ ಕಾಣಬಹುದಾಗಿದ್ದು, ವಿವಾಹಿತ ಪತಿ-ಪತ್ನಿಯರು ಬೇರ್ಪಡುವಿಕೆಯನ್ನು ಸೂಚಿಸುವ ಪದವೇ ವಿಚ್ಛೇದನೆಯಾಗಿದೆ. ಸಮಾಜದಲ್ಲಿ ಬೇರೂರಿರುವಂಥ ಪುರುಷಪ್ರಧಾನ ಮೌಲ್ಯಗಳಿಂದಾಗಿ ವಿಚ್ಛೇದಿತ ಮಹಿಳೆ ಸಮಾಜದಲ್ಲಿ ಅವಹೇಳನ, ಅಪಕೀರ್ತಿಗೆ ಒಳಗಾಗುತ್ತಾಳೆ. ಇದೇ ಸ್ಥಿತಿಯು ಪುರುಷರ ವಿಷಯದಲ್ಲಿ ಕಂಡು ಬರುವುದಿಲ್ಲ. ವಿಚ್ಛೇದನೆ ಪೂರ್ವ ಜೀವನವಿರಬಹುದು, ವಿಚ್ಛೇದನೆಯ ನಂತರದ ಜೀವನವಿರಬಹುದು. ಮಹಿಳೆಯರಿಗೆ ಸಮಸ್ಯೆಗಳ ಸರಮಾಲೆಯನ್ನು ತಂದೊಡ್ಡುತ್ತವೆ. ಆದರೆ ಪುರುಷರಿಗೆ ಅನೇಕ ಸಂಗತಿಗಳನ್ನು ಒದಗಿಸಿಕೊಡುತ್ತವೆ. ಮಹಿಳೆಯರ ಈ ಸ್ಥಿತಿಗೆ ಮೂಲಕಾರಣ ಪುರುಷಪ್ರಧಾನ ವ್ಯವಸ್ಥೆಯಲ್ಲಿನ ಮೌಲ್ಯಗಳಾಗಿವೆ. ಹಾಗಾಗಿ ಸಮಾಜದಲ್ಲಿ ಅನಾದಿಕಾಲದಿಂದಲೂ ಒಂದಲ್ಲ ಒಂದು ಬಗೆಯಲ್ಲಿ ಮಹಿಳೆಯರನ್ನು ನಿಯಂತ್ರಿಸುತ್ತಿರುವ ಸಮಾಜದಲ್ಲಿನ ಈ ಮೌಲ್ಯಗಳು ಬದಲಾಗಬೇಕಾಗಿದೆ ಹಾಗೂ ಮಹಿಳಾ ಪರವಾಗಿ ಈ ಸಮಾಜವು ಆಲೋಚಿಸಬೇಕಾಗಿದೆ. ಸಮಾಜದಲ್ಲಿ ಸ್ತ್ರೀ-ಪುರುಷ ಇಬ್ಬರಿಗೂ ಸಮಾನವಾದ ಸ್ಥಾನ ದೊರೆಯುವಂತಹ ಸ್ಥಿತಿ ನಿರ್ಮಾಣವಾಗಬೇಕೆಂಬುದೇ ಈ ಅಧ್ಯಯನದ ಮಹತ್ವವಾಗಿದೆ.

ಉಲ್ಲೇಖಗಳು

೧. ಗಾಯಿತ್ರಿ ಎನ್., ೧೯೯೧, ಮಹಿಳೆ ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

೨. ಮಂಗಳಾ ಚ.ನ., ೧೯೯೦, ಎಚ್ಚೆತ್ತ ಹಾದಿಯಲ್ಲಿ ಮಹಿಳೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

• • •

## ಅಧ್ಯಾಯ ೨

# ಪ್ರಾಚೀನ ಗ್ರಂಥಗಳಲ್ಲಿ ವಿಚ್ಛೇದನೆಗೆ ಸಂಬಂಧಿಸಿದ ಆಲೋಚನೆಗಳು

ಪ್ರಾಚೀನ ಗ್ರಂಥಗಳಲ್ಲಿ ವಿಚ್ಛೇದನೆಗೆ ಸಂಬಂಧಿಸಿದ ಆಲೋಚನೆಗಳನ್ನು ನೋಡುವ ಸಂದರ್ಭದಲ್ಲಿ ಬೌದ್ಧಾಯಣನ ಧರ್ಮಶಾಸ್ತ್ರ, ಮನುಸ್ಮೃತಿ, ಕೌಟಿಲ್ಯನ ಅರ್ಥಶಾಸ್ತ್ರ ಇವುಗಳು ಮುಖ್ಯವಾಗಿವೆ.

ಲಭ್ಯವಾದ ಮಾಹಿತಿಯ ಪ್ರಕಾರ ತ್ರೇತಾಯುಗದಲ್ಲಿ ಕೈಕೆಯ ತಾಯಿ ಇದರ ಮೊದಲ ದಾಳವನ್ನುರುಳಿಸುತ್ತಾಳೆ. ಕೈಕೆಯ ತಂದೆ ಅಶ್ವಪತಿ ರಾಜ ಹೆಂಡತಿಯೊಂದಿಗೆ ವಿರಮಿಸುತ್ತಿರುತ್ತಾನೆ. ಆಗ ಏನೋ ದೃಶ್ಯ ಕಂಡವನಂತೆ ಹುಸಿನಗುತ್ತಾನೆ. ಕೈಕೆಯ ತಾಯಿ ಅಲ್ಲಿಯೇ ಎಲೆ-ಅಡಿಕೆ ಹಾಕಿಕೊಳ್ಳುತ್ತಿದ್ದಳು. ಏಕೆ ನಕ್ಕಿದ್ದು ಎಂದು ಕೇಳುತ್ತಾಳೆ. ಏನೂ ಇಲ್ಲ ಎಂದು ಅವನು ಸುಮ್ಮನಾಗುತ್ತಾನೆ. ಆದರೆ ಅವಳು ಬಿಡುವುದಿಲ್ಲ. ಎಷ್ಟು ಹೇಳಿದರೂ ಕೇಳುವುದಿಲ್ಲ. ನೀನು ಯಾರೋ ಪರಿಚಾರಿಕೆಯನ್ನು ಇಟ್ಟು ಕೊಂಡಿದ್ದೀಯಾ, ಅದಕ್ಕೆ ಅವಳನ್ನು ನೆನಸಿಕೊಂಡು ನಗುತ್ತಿದ್ದೀಯಾ ಹೇಳು ಎಂದು ಹಟವನ್ನು ಮುಂದುವರಿಸುತ್ತಾಳೆ. ನೋಡು ನಾನು ಹೇಳಿದರೆ ನನ್ನ ಪ್ರಾಣ ಹೋಗುತ್ತದೆ ಎಂದು ಅಶ್ವಪತಿ ರಾಜ ಹೇಳಿದರೂ ಕೇಳದೆ ಕೈಕೆಯ ತಾಯಿಯು, ಹೇಳದಿದ್ದರೆ ನಾನು ನಿನ್ನನ್ನು ತೊರೆದು ಹೋಗುತ್ತೇನೆ ಎಂದು ಹೆದರಿಸುತ್ತಾಳೆ. ಆಗ ರಾಜನಿಗೆ ಆಘಾತವಾಗುತ್ತದೆ. ರಾಣಿ ರಾಜನನ್ನು ಬಿಟ್ಟು ಹೋದರೆ ರಾಜನ ಮರ್ಯಾದೆ ಏನಾಗುತ್ತದೆಂದು ಯೋಚಿಸಿ ತಾನು ಹುಸಿನಗಲು ಕಾರಣವೇನೆಂಬುದನ್ನು ತಿಳಿಸುತ್ತಾನೆ. ಹೀಗೆ ವಿಚ್ಛೇದನದ ಛಾಯೆಯ ಅಸ್ತ್ರವನ್ನು ಆ ಕಾಲದಲ್ಲಿಯೇ ಕೈಕೆಯ ತಾಯಿಯು ಉಪಯೋಗಿಸುತ್ತಾಳೆ (ಡಿ.ಎಸ್ ವಿಶ್ವನಾಥ, ೨೦೦೫, ಪು. ೮೬).

ಮೇಲಿನ ಹೇಳಿಕೆಯು ಪತ್ನಿ-ಪತಿಯನ್ನು ತ್ಯಜಿಸಬಹುದಾಗಿದ್ದ ಅವಕಾಶವನ್ನು ಸೂಚಿಸುತ್ತದೆಯಾದರೂ ಮುಂದಿನ ಹಂತದಲ್ಲಿ ಅಂದರೆ ಧರ್ಮಶಾಸ್ತ್ರಗಳ ಕಾಲದಲ್ಲಿ ಮನುಸ್ಮೃತಿ ಕಾಲದಲ್ಲಿ ಮಹಿಳೆ ಈ ಅವಕಾಶದಿಂದ ವಂಚನೆಯಾಗಿರುವುದು ಕಂಡು ಬರುತ್ತದೆ.

ಋಗ್ವೇದದಲ್ಲಿ ಬಳಕೆಗೊಂಡ 'ಪರಾಪೂರ್ವ' ಮತ್ತು 'ದಿದಿಶು' - ಅಂದರೆ ಕ್ರಮವಾಗಿ ಎರಡನೇ ಪತಿಯನ್ನು ಹೊಂದಿರುವ ಸ್ತ್ರೀ ಮತ್ತು ಎರಡನೇ ಪತಿಯಾದವ ಎಂಬ ಪದಗಳು ವೇದಕಾಲದ ಆರಂಭದಲ್ಲಿ ಸ್ತ್ರೀಯರಿಗೆ ಒಂದಕ್ಕಿಂತ ಹೆಚ್ಚು ಬಾರಿ ಮದುವೆ ಅವಕಾಶ ಇತ್ತೆಂಬುದನ್ನು ಸೂಚಿಸುತ್ತದೆ. ಅದನ್ನು

ವಿವಾಹ ವಿಚ್ಛೇದನೆ ಅಥವಾ ವೈಧವ್ಯದ ನಂತರದ ಮದುವೆಯೆಂದಾಗಲೀ, ಬಹುಪತಿತ್ವವೆಂದಾಗಲೀ ಅರ್ಥೈಸಬಹುದು (ವಿಜಯಾ ದಬ್ಬೆ, ೧೯೯೮, ಪು. ೧೩೭).

ಮದುವೆಯನ್ನು 'ಬಿಡಿಸಲಾಗದ ಏಳೇಳು ಜನ್ಮದ ನಂಟು' ಎಂದು ಹೇಳುವ ಧರ್ಮಶಾಸ್ತ್ರಗಳಲ್ಲಿಯೂ ವಿಚ್ಛೇದನದ ಕುರಿತು ಪ್ರಸ್ತಾಪ ಕಂಡು ಬರುತ್ತದೆ. ಧರ್ಮಶಾಸ್ತ್ರಜ್ಞರಲ್ಲಿ ಒಬ್ಬನಾಗಿದ್ದ ಬೌದ್ಧಾಯಣನು ಪುರುಷನು ತನ್ನ ಬಂಜೆಯಾದ ಹೆಂಡತಿಯನ್ನು ೧೦ನೇ ವರ್ಷದಲ್ಲೂ, ಕೇವಲ ಹೆಣ್ಣು ಮಕ್ಕಳನ್ನೇ ಹಡೆದ ಹೆಂಡತಿಯನ್ನು ೧೨ನೇ ವರ್ಷದಲ್ಲೂ, ಹಡೆದ ಎಲ್ಲಾ ಮಕ್ಕಳನ್ನು ಕಳೆದುಕೊಂಡ ಹೆಂಡತಿಯನ್ನು ೧೫ನೇ ವರ್ಷದಲ್ಲೂ ತ್ಯಜಿಸಬಹುದು ಎನ್ನುತ್ತಾ 'ಜಗಳಗಂಟ' ಹೆಂಡತಿಯನ್ನು ಮಾತ್ರ ತಕ್ಷಣವೇ ತ್ಯಜಿಸಿ ಬೇರೆ ವಿವಾಹವಾಗಬಹುದು ಎಂದು ತಿಳಿಸುತ್ತಾನೆ. ಆದರೆ ಹೆಂಡತಿ, ಗಂಡನನ್ನು ಬಿಡುವುದಕ್ಕೆ ಬೇಕಾದ ಕಾರಣಗಳ ಕುರಿತು ಎಲ್ಲಿಯೂ ತಿಳಿಸಿಲ್ಲ.

ಏಕಪಕ್ಷೀಯ ನಿಲುವನ್ನು ತಿಳಿಸುವ ಬೌದ್ಧಾಯಣನು ಹೆಣ್ಣು ಮಕ್ಕಳಿಗೆ ಮದುವೆ ಅನಿವಾರ್ಯ. ಹಾಗೆ ಅವಿವಾಹಿತೆಯಾಗಿ ಸತ್ತ ಹುಡುಗಿಗೆ ಪಿಂಡ ಪ್ರಧಾನ ಕೂಡದು. ವಿವಾಹಿತೆಯಾದ ಸ್ತ್ರೀಗೆ ಅಂತ್ಯಕ್ರಿಯೆಗಳು ಆಚಾರವೇ ಹೊರತು ಪರಲೋಕ ಪ್ರಾಪ್ತಿಗಲ್ಲ ಎಂದು ಹೇಳುತ್ತಾನೆ. ಆ ಮೂಲಕ ಮಹಿಳೆಯರ ಬದುಕನ್ನು ವಿವಾಹ ಸಂಸ್ಥೆಗೆ ಮೀಸಲಿರಿಸಲಾಗಿದೆ.

ಪುರುಷರಿಗೆ ವಿವಾಹ ಬಂಧನದಿಂದ ಹೊರಬರಲು ಅವಕಾಶ ಕಲ್ಪಿಸಿರುವ ಬೌದ್ಧಾಯಣನು, ಯಾವ ಕಾರಣಗಳಿಂದಾಗಿ ಪತಿಯಾದವನು ಪತ್ನಿಯನ್ನು ತ್ಯಜಿಸಬಹುದೆಂದು ತಿಳಿಸಿರುವನು ಎನ್ನುವುದನ್ನು ತಿಳಿಯುವುದು ಅಗತ್ಯವಾಗಿದೆ. ಬಂಜೆಯಾದ ಹೆಂಡತಿಯನ್ನು ೧೦ನೇ ವರ್ಷದಲ್ಲಿ ತ್ಯಜಿಸಬಹುದೆಂದು ಹೇಳುವ ಮೂಲಕ ಬಂಜೆತನಕ್ಕೆ ಸಂಪೂರ್ಣ ಮಹಿಳೆಯರನ್ನು ಹೊಣೆಯಾಗಿಸಿದ್ದಾನೆ. ಬಂಜೆತನವು ಪುರುಷರಿಂದಲೂ ಬರುತ್ತವೆ ಎನ್ನುವುದನ್ನು ಮರೆಮಾಚಲಾಗಿದೆ. ಕೇವಲ ಹೆಣ್ಣು ಮಕ್ಕಳನ್ನೇ ಹಡೆದ ಹೆಂಡತಿಯನ್ನು ೧೨ನೇ ವರ್ಷದಲ್ಲಿ ತ್ಯಜಿಸಬಹುದೆಂದು ಹೇಳಿರುವುದನ್ನು ನೋಡಿದರೆ ಗಂಡು ಮಕ್ಕಳಿಗೆ ಕೊಟ್ಟಷ್ಟು ಪ್ರಾಧಾನ್ಯತೆಯನ್ನು ಹೆಣ್ಣುಮಕ್ಕಳಿಗೆ ಕೊಡದಿರುವುದು ಕಂಡು ಬರುತ್ತದೆ. ಜೊತೆಗೆ ಗಂಡು ಮಗನ ಪ್ರಾಪ್ತಿಗಾಗಿ ಬೇರೊಂದು ಮದುವೆ ಮಾಡಿಕೊಳ್ಳಬೇಕು ಎಂದಿರುವುದನ್ನು ನೋಡಿದಾಗ, ಭೌದ್ಧಾಯಣನ ದೃಷ್ಟಿಯಲ್ಲಿ ಗಂಡು ಮಕ್ಕಳಿಗೆ ಇರುವ ಪ್ರಾಧಾನ್ಯತೆ ತಿಳಿಯುತ್ತದೆ. ಒಬ್ಬ ಮಹಿಳೆ ಮಗುವಿಗೆ ಜನ್ಮವಿತ್ತಿರುವಾಗ ಆ ಮಗು ಗಂಡೊ ಅಥವಾ ಹೆಣ್ಣೊ ಆಗಿ ಹುಟ್ಟಲಿಕ್ಕೆ ಕಾರಣ ಪುರುಷರಲ್ಲಿರುವ ವೀರ್ಯಾಣುವೇ ಕಾರಣವಾಗಿರುತ್ತದೆ. ಆದರೆ ಇಲ್ಲಿ ಹೆಣ್ಣು ಮಗು ಜನಿಸಲಿಕ್ಕೆ ಮಹಿಳೆಯರನ್ನೇ ದೂಷಿಸಲಾಗಿದೆ. ತನ್ನದಲ್ಲದ ತಪ್ಪಿಗೆ ಮಹಿಳೆಯರನ್ನು ಹೊಣೆಯಾಗಿಸಿ ತಪ್ಪು ಮಾಡಿದವನಿಗೆ ಶಿಕ್ಷೆ ಕೊಡುವ ಅಧಿಕಾರವನ್ನು ನೀಡಲಾಗಿದೆ. ಹಡೆದ ಎಲ್ಲಾ ಮಕ್ಕಳನ್ನು, ಕಳೆದುಕೊಂಡ ತಾಯಿಯನ್ನು ಪತಿಯಾದವನು ತ್ಯಜಿಸಬಹುದೆನ್ನುವ ಮೂಲಕ ಮಕ್ಕಳ ಸಾವಿಗೂ ಮಹಿಳೆಯರ ಬದುಕಿಗೂ ಸಮೀಕರಿಸಿದ್ದಾನೆ. 'ಜಗಳಗಂಟ' ಹೆಂಡತಿಯನ್ನು ತಕ್ಷಣವೇ ತ್ಯಜಿಸಬೇಕೆಂದೇಳುವ ಬೌದ್ಧಾಯಣ

'ಜಗಳಗಂಟ' ಗಂಡನ ಬಗ್ಗೆ ಮಾತಾಡುವುದಿಲ್ಲ. ನಮ್ಮ ಸಮಾಜದಲ್ಲಿ 'ಜಗಳಗಂಟ' ಎನ್ನುವಂಥ ಪದವನ್ನೇ ಬಳಸುವುದಿಲ್ಲ. 'ಜಗಳಗಂಟಿ' ಎನ್ನುವಾಗ ಜಗಳಕ್ಕೆ ಕಾರಣವೇನು? ಎನ್ನುವುದರ ಬಗ್ಗೆ ಮಾತನಾಡುವುದಿಲ್ಲ. ಹಾಗೆ ಯಾರ-ಯಾರ ನಡುವಿನ ಜಗಳ ಎನ್ನುವುದನ್ನು ತಿಳಿಸುವುದಿಲ್ಲ. ಇಲ್ಲಿ ಜಗಳಕ್ಕೆ ಗಂಡನೇ ಮೂಲ ಕಾರಣವಾಗಿರಬಹುದಾದರೂ ಹೆಂಡತಿಯನ್ನು ಮಾತ್ರ ಜಗಳಗಂಟಿ ಎಂದು ಕರೆದು, ಆ ಕಾರಣಕ್ಕಾಗಿ ಪತಿಯು ಪತ್ನಿಯನ್ನು ತ್ಯಜಿಸಬಹುದೆನ್ನುವ ಬೌಧ್ಧಾಯಣ ಎಲ್ಲಿಯೂ ಪತ್ನಿಯಾದವಳು ಯಾವ ಕಾರಣಕ್ಕೆ ಪತಿಯನ್ನು ತ್ಯಜಿಸಬಹುದೆಂದು ಹೇಳುವುದಿಲ್ಲ.

"ಇಂದು ನಾವು ಮನುಸ್ಮೃತಿ ಎಂದು ಕರೆಯುತ್ತಿರುವ ಗ್ರಂಥ ಯಾವ ಕಾಲದಲ್ಲಿ ರಚಿತವಾದುದೆಂದು ಖಚಿತವಾಗಿ ಹೇಳಲಾರೆವು. ಇದರಲ್ಲಿ ಒಂದಕ್ಕೊಂದು ಸಂಬಂಧವಿಲ್ಲದ ಅನೇಕ ಭಾವನೆಗಳು ವ್ಯಕ್ತವಾಗಿವೆ. ಒಂದೆಡೆ ಸ್ತ್ರೀಯು ಅವಿವಾಹಿತಳಾಗಿ ಉಳಿಯಬಹುದು. ಆದರೆ ತಂದೆ ಆರಿಸಿದ ಅಯೋಗ್ಯವರನನ್ನು ಮದುವೆಯಾಗಬೇಕಾಗಿಲ್ಲವೆಂದು ತಿಳಿಸುವ ಮೂಲಕ ಮಹಿಳೆಯರು ಅವಿವಾಹಿತರಾಗಿ ಉಳಿಯಲು ಅವಕಾಶ ನೀಡಿರುವುದು ಕಂಡು ಬಂದರೂ ಇನ್ನೊಂದೆಡೆ "ಪಿತಾ ರಕ್ಷತಿ ಕೌಮಾರೆ" ಎಂಬಂತಹ ಮಾತಿನಿಂದ ಹಿಡಿದು "ನಸ್ತ್ರೀಂ ಸ್ವಾತಂತ್ರ್ಯಮರ್ಹತಿ" ಎಂದು ಅವರ ಸ್ವಾತಂತ್ರ್ಯಕ್ಕೆ ಅವಕಾಶ ನೀಡದಿರುವುದು ಕಂಡು ಬರುತ್ತದೆ. ಇದಕ್ಕೆ ಕಾರಣ ಈ ಸ್ಮೃತಿಯನ್ನು ಒಬ್ಬನೇ ಮನು ಬರೆದಿಲ್ಲವೆಂದು, ಅನೇಕ ಮನುಗಳಿದ್ದು ಅವರು ಭಿನ್ನ ಭಿನ್ನ ಕಾಲದವರಾಗಿದ್ದರಿಂದ ಈ ರೀತಿಯ ವಿಭಿನ್ನ ದೃಷ್ಟಿಕೋನಗಳು ಉಂಟಾಗಿದೆಯೆಂದೂ, ಇಂದು ನಾವು ಕರೆಯುತ್ತಿರುವ ಮನುಧರ್ಮಶಾಸ್ತ್ರ ಗ್ರಂಥ ಇವರೆಲ್ಲರ ಕ್ರೋಡೀಕರಣವೆಂದು ಕೊನೆಯವನಾದ ದೈವಸ್ವತ ಮನು ಇದನ್ನು ಸಂಕಲಿಸಿದನೆಂದು ವಿದ್ವಾಂಸರು ಹೇಳುತ್ತಾರೆ". ಇಂತಹ ಮನುಸ್ಮೃತಿಯು "ವಿವಾಹದ ನಂತರ ಸತಿ-ಪತಿಗಳಿಬ್ಬರೂ ನಿತ್ಯ ಜತೆಗೂಡಿದ್ದು, ಅನ್ಯೋನ್ಯವಾಗಿ ಬಾಳುತ್ತಾ ಧರ್ಮಾರ್ಥಕಾಮಗಳನ್ನು ಸಂಪಾದಿಸಲು ಪ್ರಯತ್ನಿಸಬೇಕೆಂದು ಹೇಳುವ ಮೂಲಕ ವಿವಾಹ ಬಂಧನಕ್ಕೆ ಪ್ರಾಮುಖ್ಯತೆ ಕೊಡುವುದು ಕಂಡು ಬರುತ್ತದೆ. ಹಾಗೆಯೇ ಪತಿಯಾದವನು ಪತ್ನಿಯನ್ನು ತ್ಯಜಿಸುವಿಕೆಯ ಕುರಿತು ತಿಳಿಸಲಾಗುತ್ತಿದೆ. ಇದನ್ನು ಕೆಳಗಿನ ಶ್ಲೋಕಗಳ ಮೂಲಕ ಸ್ಪಷ್ಟಪಡಿಸಲಾಗಿದೆ.

"ವಿಧಿವತ್ತಾಗಿ ಮದುವೆ ಮಾಡಿಕೊಂಡಿದ್ದರೂ ಅವಳು ಅಮಂಗಳೇಯಾಗಿದ್ದರೆ, ವ್ಯಾಧಿಗ್ರಸ್ಥಳಾಗಿದ್ದರೆ, ವ್ಯಭಿಚಾರದ ಅಪವಾದ ಹೊತ್ತಿದ್ದರೆ ಅಂಗವಿಕಲತೆಯನ್ನು ಮುಚ್ಚಿಟ್ಟಿದ್ದರೆ ಅಂಥ ಕನ್ಯೆಯನ್ನು ತ್ಯಜಿಸಬಹುದು" (ಶೇಷ ನವರತ್ನ, ೨೦೦೫, ಪು. ೩೯೫).

"ತನ್ನಲ್ಲಿ ಜಗಳವಾಡಿಕೊಂಡು ದ್ವೇಷ ಸಾಧಿಸಲು ತೆರಳಿದ ಪತ್ನಿಗಾಗಿ ಗಂಡನು ಒಂದು ವರ್ಷದ ತನಕ ಹಾದಿ ಕಾಯಬೇಕು. ಒಂದು ವರ್ಷದ ನಂತರದಲ್ಲಿ ಅವಳು ಹಾಗೆ ಸಾಧಿಸಿದರೆ ತಾನು ಕೊಟ್ಟ ವಸ್ತು ಒಡವೆಗಳನ್ನು ಕಸಿದುಕೊಂಡು ಆಕೆಯನ್ನು ಬಿಟ್ಟು ಬಿಡಬೇಕು" (ಶೇಷ ನವರತ್ನ, ೨೦೦೫, ಪು. ೩೯೬).

"ಹೆಂಡತಿಯು ಗರ್ಭಧರಿಸದಿದ್ದರೆ ಕಾದು ನಂತರ ಎಂಟನೇ ವರ್ಷದಲ್ಲಿ ಮರುಮದುವೆಯಾಗಬಹುದು. ಹಡೆದ ಮಕ್ಕಳೆಲ್ಲವು ಸಾಯುತ್ತಿದ್ದರೆ ಒಂಬತ್ತು ವರ್ಷ ಕಾದು ಹತ್ತನೆಯ ವರ್ಷದಲ್ಲಿ ಮರುಮದುವೆಯಾಗಬಹುದು. ಮೊದಲನೆ ಹೆಂಡತಿಯು ಬರಿ ಹೆಣ್ಣು ಹಡೆಯುತ್ತಿದ್ದರೆ ಹನ್ನೊಂದನೆಯ ವರ್ಷದಲ್ಲಿ ಇನ್ನೊಂದು ಮದುವೆಯಾಗಬಹುದು. ಕೆಟ್ಟ ಮಾತನಾಡುವ ಹೆಂಡತಿಯನ್ನು, ಅಪುತ್ರವತಿಯಾಗಿದ್ದರೆ ತಕ್ಷಣವೇ ಬಿಡತಕ್ಕದ್ದು" (ಶೇಷ ನವರತ್ನ, ೨೦೦೫, ಪು. ೩೯೭)

- ಎಂದು ಹೇಳುವ ಮೂಲಕ ದಾಂಪತ್ಯ ಬಿಡುಗಡೆಯ ಬಗ್ಗೆ ತಿಳಿಸುವ ಮನುಸ್ಮೃತಿಯಲ್ಲಿ ಬಿಡುಗಡೆಯ ಈ ಅವಕಾಶವನ್ನು ಮಹಿಳೆಯರ ಪಾಲಿಗೂ ನೀಡಲಾಗಿದೆಯೇ ಎನ್ನುವುದನ್ನು ತಿಳಿಯ ಹೊರಟರೆ ಇಲ್ಲವೆಂದೇ ಹೇಳಬಹುದು. ಯಾಕೆಂದರೆ ಈ ಸ್ಮೃತಿಯಲ್ಲಿನ ಒಂದು ಶ್ಲೋಕ ಈ ಕೆಳಗಿನಂತೆ ತಿಳಿಸುತ್ತದೆ.

"ಪತಿಯ ನಡತೆಯು ಚೆನ್ನಾಗಿರದಿದ್ದರೂ, ಕಾಮಾತುರನಾಗಿ ಅವನು ಅನ್ಯ ಹೆಂಗಸರಲ್ಲಿ ಮನಸಿಟ್ಟರೂ ದುರ್ಗುಣಿಯಾಗಿದ್ದರೂ ಸಹ ಸಾಧ್ವಿಯಾದ ಹೆಂಡತಿಯು ತನ್ನ ಪತಿಯನ್ನು ದೇವರೆಂದು ಭಾವಿಸಿ ಸೇವೆ ಮಾಡಬೇಕು" (ಶೇಷ ನವರತ್ನ, ೨೦೦೫, ಪು. ೨೨೬). ಪರೋಕ್ಷವಾಗಿ ಹೀಗೆ ತಿಳಿಸುವ ಮೂಲಕ ಪತ್ನಿಯಾದವಳು ಎಂಥ ಸಂದರ್ಭದಲ್ಲಿಯೂ ಪತಿಯನ್ನು ತೊರೆದು ಹೋಗದಂತೆ ತಿಳಿಸಲಾಗಿದೆ.

ಪತಿಗೆ ಪತ್ನಿಯಿಂದ ಬಿಡುಗಡೆ ಹೊಂದಲು ಅವಕಾಶ ಕಲ್ಪಿಸಿರುವ ಮನುಸ್ಮೃತಿಯಲ್ಲಿ ಎಂಥ ಸಂದರ್ಭದಲ್ಲಿ ಪತ್ನಿಯನ್ನು ಬಿಡಬಹುದೆಂದು ತಿಳಿಸಲಾಗುತ್ತಿದೆ ಎನ್ನುವುದನ್ನು ನೋಡುವುದರ ಅವಶ್ಯಕತೆ ಇದೆ. ತನ್ನಲ್ಲಿ ಜಗಳ ಮಾಡಿಕೊಂಡು ದ್ವೇಷ ಸಾಧಿಸಲು ತೆರಳಿದ ಪತ್ನಿಗಾಗಿ ಗಂಡನು ಒಂದು ವರ್ಷದ ತನಕ ಕಾದು, ಒಂದು ವರ್ಷದ ನಂತರದಲ್ಲಿ ಅವಳು ಬರದೆ ಇದ್ದರೆ ಆಕೆಯನ್ನು ಬಿಟ್ಟು ಬಿಡಬೇಕೆಂದು ಹೇಳುವಲ್ಲಿ ಪತ್ನಿಯಾದವಳು ಗಂಡ ಏನೇ ಮಾಡಿದರೂ ಸಹಿಸಿಕೊಂಡು ಅವಳ ಜೊತೆ ಜಗಳ ಮಾಡದೇ ಹೊಂದಾಣಿಕೆಯ ಜೀವನ ನಡೆಸಬೇಕು. ಅವನು ಕ್ರೂರಿಯಾಗಿರಲಿ, ಕುಡುಕನಾಗಿರಲಿ ಅವನು ಮಾಡುವ ಯಾವುದೇ ಕೆಲಸವನ್ನು ಏನೂ, ಎತ್ತ ಎಂದು ಪ್ರಶ್ನಿಸದೇ ಅವನು ಮಾಡಿದ ಹಾಗೆ ಮಾಡಿಸಿಕೊಂಡು, ಅವನು ಕೊಡುವ ಹಿಂಸೆಗಳನ್ನೆಲ್ಲ ಸಹಿಸಿಕೊಂಡು, ಅವನ ಜೊತೆ ಬದುಕಬೇಕು. ಅದೇ ಅವಳ ಪತಿಧರ್ಮ ಎನ್ನುವಂಥ ಧೋರಣೆಯದ್ದಾಗಿದೆ. ಇಲ್ಲಿ ಪತ್ನಿ-ಪತಿಯ ಜೊತೆ ಜಗಳ ಮಾಡಿಕೊಂಡು ತೆರಳಿದಂಥ ಸಂದರ್ಭದಲ್ಲಿ ಪತಿಯಾದವನು ಪತ್ನಿಯನ್ನು ತ್ಯಜಿಸಬಹುದೆಂದು ತಿಳಿಸಲಾಗುತ್ತದೆ ವಿನಃ ಪತಿಯಾದವನು ಪತ್ನಿಯ ಜೊತೆ ಜಗಳವಾಡಿದಂಥ ಸಂದರ್ಭದಲ್ಲಿ ಪತ್ನಿಯಾದವಳು ಏನು ಮಾಡಬೇಕೆನ್ನುವುದರ ಬಗ್ಗೆ ತಿಳಿಸುವುದಿಲ್ಲ.

"ಕೆಟ್ಟ ಮಾತನಾಡುವ ಹೆಂಡತಿಯನ್ನು, ಅಪುತ್ರವತಿಯಾಗಿದ್ದರೆ ತಕ್ಷಣ ಬಿಡತಕ್ಕದ್ದು" ಎಂದು ಹೇಳುವಲ್ಲಿ ಕೆಟ್ಟ ಮಾತನಾಡುವ ಹೆಂಡತಿಯನ್ನು ತಕ್ಷಣ ಬಿಡಬೇಕೆಂದು ಹೇಳಲಾಗುತ್ತದೆ.

"ಪಿತೃಪ್ರಧಾನ ವ್ಯವಸ್ಥೆ ಹೆಣ್ಣಿಗೆ ಯಾವುದನ್ನು ಮಾತನಾಡಕೂಡದು ಎಂದು ನಿಷೇಧಿಸಿರುತ್ತದೆಯೋ ಅದನ್ನು ಮಾತನಾಡಿದರೆ ಅದು ಹೆಣ್ಣಿನ ಕೆಟ್ಟ ಮಾತುಗಳಾಗಿರುತ್ತವೆ. ಪಿತೃಪ್ರಧಾನ ವ್ಯವಸ್ಥೆ ಹೇಳುವ ಹೆಣ್ಣಿನ ಕೆಟ್ಟ ಮಾತುಗಳು, ಅವಳ ಸ್ವತಂತ್ರ ಅಭಿವ್ಯಕ್ತಿಯಾಗಿರುತ್ತದೆ. ಒಟ್ಟಾರೆ ಹೆಣ್ಣಿಗೆ ಅಭಿವ್ಯಕ್ತಿಗಳ ನಿಯಂತ್ರಣವಿದ್ದುದು ತಿಳಿದು ಬರುತ್ತದೆ. ಗಂಡಸಿನ ಸಂದರ್ಭದಲ್ಲಿ 'ಕೆಟ್ಟ ಮಾತುಗಳ' ಪ್ರಸ್ತಾಪವೇ ಬರುವುದಿಲ್ಲ. ಅಂದರೆ ಆತನಿಗೆ ಮುಕ್ತ ಅಭಿವ್ಯಕ್ತಿ ಸ್ವಾತಂತ್ರ್ಯವಿದ್ದುದು ತಿಳಿದು ಬರುತ್ತದೆ.

ಅಪುತ್ರವತಿಯಾಗಿದ್ದರೆ ತಕ್ಷಣ ಬಿಡತಕ್ಕದ್ದು ಎನ್ನುವಲ್ಲಿ ಪುತ್ರಿ ಸಂತಾನಕ್ಕಿಂತ ಪುತ್ರ ಸಂತಾನಕ್ಕೆ ಪ್ರಾಮುಖ್ಯತೆ ನೀಡಿರುವುದು ಕಂಡು ಬರುತ್ತದೆ. ಪುತ್ರ ಸಂತಾನಕ್ಕಾಗಿಯೇ ಪತ್ನಿಯನ್ನು ತ್ಯಜಿಸಿ, ಮತ್ತೊಂದು ಮದುವೆಯಾಗಬೇಕೆನ್ನುವ ನಿಲುವು ಮಹಿಳಾ ಅಸ್ತಿತ್ವವನ್ನು ಅಲ್ಲಗಳೆಯುವಂತಿದೆ. ಅಲ್ಲದೆ ಮಹಿಳಾ ಬದುಕು ಸ್ಥಿರವಾಗಬೇಕಿದ್ದರೆ ಪುತ್ರ ಸಂತಾನ ಅವಶ್ಯಕವಾಗಿದೆ. ಬೌದ್ಧಾಯಣನಂತೆ ಮನುಸ್ಮೃತಿಯಲ್ಲಿಯೂ ಮಗು ಹೆಣ್ಣೋ, ಗಂಡೋ ಎನ್ನುವಲ್ಲಿ ಸಂಪೂರ್ಣ ಹೊಣೆಯನ್ನು ಮಹಿಳೆಯರ ಮೇಲಾಕಿ ತನ್ನದಲ್ಲದ ತಪ್ಪಿಗೆ ಸಮಾಜದಲ್ಲಿ ಅವಳು ಅವಮಾನಕ್ಕೊಳಗಾಗುವಂತೆ ಮಾಡಲಾಗಿದೆ. ಯಾಕೆಂದರೆ ಇಂದಿನ ಆಧುನಿಕ ಸಂದರ್ಭದಲ್ಲಿಯೂ ವಿವಾಹ ಬಂಧನದಿಂದ ಹೊರಬಂದಿರುವಂಥ ಮಹಿಳೆಯರ ಕುರಿತು ಸಂಪ್ರದಾಯಿಕ ಸಮಾಜದಲ್ಲಿ ನಕಾರಾತ್ಮಕ ಧೋರಣೆ ಕಂಡು ಬರುತ್ತದೆ. ಅಂಥದ್ದರಲ್ಲಿ ವಿವಾಹ ಸಂಸ್ಥೆಯ ಕುರಿತು "ಪವಿತ್ರ ಸಂಸ್ಕಾರ" ಎನ್ನುವಂಥ ಮನೋಭಾವ ಬಲವಾಗಿ ಇದ್ದಂಥ ಆ ಸಂದರ್ಭದಲ್ಲಿ ವಿವಾಹ ಬಂಧನ ದಿಂದ ಹೊರಬಂದಿರುವಂಥ ಸ್ಥಿತಿಯೂ ತನ್ನದಲ್ಲದ ತಪ್ಪಿಗೆ ಸಾಮಾಜದೆದುರು ನಿಂದನೆಗೊಳಗಾಗುವಂಥ ಸಂದರ್ಭವನ್ನು ಸೂಚಿಸುತ್ತದೆ.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಕೌಟಿಲ್ಯನು 'ವಿವಾಹವು ಪವಿತ್ರವಾದ ಬಂಧನ ಅದನ್ನು ಮುರಿಯುವಂತಿಲ್ಲ' ಎಂದು ಹೇಳುತ್ತಾನೆ. ಕೆಲವು ಸಂದರ್ಭದಲ್ಲಿ ವಿಚ್ಛೇದನೆ ಹೊಂದಲು ಒಪ್ಪಿಗೆ ನೀಡಿದ್ದಾನೆ. ಸ್ತ್ರೀ ಹಾಗೂ ಪುರುಷರಿಬ್ಬರಿಗೂ ವಿವಾಹ ವಿಚ್ಛೇದನೆ ಹೊಂದಬಹುದೆಂದು ಕೌಟಿಲ್ಯ ತಿಳಿಸುತ್ತಾನೆ. "ಒಬ್ಬ ಪುರುಷ ಒಬ್ಬಳನ್ನೇ ಮದುವೆಯಾಗುವುದು ಧರ್ಮಸಮ್ಮತವೆಂದು ಆ ಕಾಲದಲ್ಲಿ ಭಾವಿಸಿದಂತೆ ತೋರುತ್ತದೆ. ಆದರೂ ಕೆಲಸಂದರ್ಭಗಳಲ್ಲಿ ಬೇರೆ ಮದುವೆಯಾಗಬಹುದೆಂದು ಒಪ್ಪಿಗೆ ನೀಡಲಾಗಿದೆ. ಹೆಂಡತಿಗೆ ಮಕ್ಕಳಾಗದಿದ್ದಾಗ, ಅವಳಿಗೆ ಗಂಡು ಮಕ್ಕಳಿಲ್ಲದಿದ್ದಾಗ ಎಂಟು ವರುಷಗಳವರೆಗೆ ಸಾಲಾಗಿ ಸತ್ತ ಮಕ್ಕಳನ್ನು ಪ್ರಸವಿಸಿದಾಗ ಹನ್ನೆರಡು ವರ್ಷಗಳವರೆಗೆ ಗಂಡನಾದವನು ಕಾದು ನೋಡಿ ಅನಂತರ ಪುತ್ರ ಸಂತಾನಾಕಾಂಕ್ಷಿಯಾಗಿ ಬೇರೊಂದು ಹೆಂಡತಿಯನ್ನು ಕೈ ಹಿಡಿಯಬಹುದೆನ್ನುವ ಮೂಲಕ ಮೊದಲ ಹೆಂಡತಿಯನ್ನು ತ್ಯಜಿಸುವಿಕೆಯ ಕುರಿತು ತಿಳಿಸುವ ಕೌಟಿಲ್ಯನು, ಸ್ತ್ರೀಯರು ಪತಿಯಂದಿರನ್ನು ತ್ಯಜಿಸುವಿಕೆಯ ಬಗ್ಗೆ ಕೂಡ ಮಾತನಾಡುತ್ತಾನೆ. ಈತನ ಅಭಿಪ್ರಾಯದಂತೆ;

- ಪತಿಯು ತಲೆಮರೆಸಿಕೊಂಡು ದೇಶಾಂತರ ಹೋಗಿದ್ದರೆ.
- ಸನ್ಯಾಸ ಸ್ವೀಕರಿಸಿದ್ದರೆ.

- ಜಾತಿ ಭ್ರಷ್ಟನಾಗಿದ್ದರೆ.
- ನಪುಂಸಕನಾಗಿದ್ದರೆ.
- ದುಷ್ಟನಾದವನನ್ನು.
- ತನ್ನ ಪ್ರಾಣಕ್ಕೆ ಹಾನಿ ಮಾಡಲೆಣಿಸಿದವನನ್ನು" (ನಿರೂಪಮ, ೧೯೯೬, ಪು. ೧೧೪-೧೧೫).

- ಹೆಂಡತಿಯಾದವಳು ತ್ಯಜಿಸಬಹುದೆಂದು ಹೇಳುವ ಮೂಲಕ ಪುನರ್‌ವಿವಾಹವಾಗಬಹುದೆಂದು ತಿಳಿಸುತ್ತಾನೆ.

ಕೌಟಿಲ್ಯನು ಹೆಂಡತಿಯರಿಗೂ ಗಂಡನನ್ನು ತ್ಯಜಿಸುವಿಕೆಯಲ್ಲಿ ಅವಕಾಶ ಕಲ್ಪಿಸಿರುವುದು ಗಮನಾರ್ಹ ಸಂಗತಿಯಾಗಿದೆ. ಗಂಡನಾದವನು ಎಂಥ ಹೆಂಡತಿಯನ್ನು ತ್ಯಜಿಸಬಹುದೆಂಬ ಹೇಳಿಕೆಯನ್ನು ನೋಡು ವುದಾದರೆ, ಇವನು ಪುರುಷರಿಗೆ ಮೊದಲ ಸ್ಥಾನ ನೀಡಿರುವುದು ಕಂಡು ಬರುತ್ತದೆ. ಹೆಂಡತಿಗೆ ಮಕ್ಕಳಾಗದಿದ್ದಾಗ ಎನ್ನುವಾಗ ಮಕ್ಕಳಾಗದಿರುವುದಕ್ಕೆ ಸಂಪೂರ್ಣ ಹೊಣೆಯನ್ನು ಹೆಂಡತಿಗೆ ಹೊರಿಸಲಾಗಿದೆ. ಗಂಡು ಮಕ್ಕಳು ಇಲ್ಲದಿದ್ದಾಗಲೂ ಹೆಂಡತಿಯನ್ನು ತ್ಯಜಿಸಿ ಮರುವಿವಾಹವಾಗಬೇಕೆನ್ನುವುದರಲ್ಲಿ, ಬೌದ್ಧಾಯಣನ ಧರ್ಮಶಾಸ್ತ್ರ ಹಾಗೂ ಮನುಸ್ಮೃತಿಯು ನೀಡಿರುವ ಗಂಡು ಮಕ್ಕಳ ಪ್ರಾಧ್ಯಾನ್ಯತೆಯನ್ನು ಇಲ್ಲಿಯೂ ಕಾಣಬಹುದಾಗಿದೆ. ಮಕ್ಕಳ ಸಾವಿಗೂ ಮತ್ತು ಮಹಿಳೆಯರ ಬದುಕಿಗೂ ಸಮೀಕರಿಸಿರುವುದು ಇಲ್ಲಿಯೂ ಗುರುತಿಸಬಹುದು.

ಕೌಟಿಲ್ಯನು ಗಂಡನ ತ್ಯಜಿಸುವಿಕೆಗೆ ಸಂಬಂಧಿಸಿದಂತೆ ಸೂಚಿಸಿದ ಕಾರಣಗಳು ಇಂದಿನ ಆಧುನಿಕ ಯುಗದಲ್ಲಿ ನಮ್ಮ ಕಾನೂನಿನಲ್ಲಿಯೂ ಇದ್ದು, ಅದೇ ಕಾರಣಗಳಿಗಾಗಿ ವಿಚ್ಛೇದನೆ ಪಡೆಯುವ ಸೌಲಭ್ಯ ವನ್ನು ಕಲ್ಪಿಸಲಾಗಿದೆ.

ಮೇಲಿನ ಎಲ್ಲಾ ಪ್ರಾಚೀನ ಗ್ರಂಥಗಳಲ್ಲಿ ಒಟ್ಟಾರೆಯಾಗಿ ವಿಚ್ಛೇದನೆಯ ಆಲೋಚನೆ ಕ್ರಮವನ್ನು ನೋಡಿದಾಗ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಮಾತ್ರ ಮಹಿಳೆಯರಿಗೆ ವಿವಾಹ ಬಂಧನದಿಂದ ಹೊರಬರಲು ಅವಕಾಶ ಕಲ್ಪಿಸಿರುವುದು ಕಂಡು ಬರುತ್ತದೆ. ಇಲ್ಲಿ ಕೌಟಿಲ್ಯ ಮಹಿಳೆಯರಿಗೆ ಬಿಡುಗಡೆಯ ಅವಕಾಶ ಕಲ್ಪಿಸಿರುವುದು ಒಪ್ಪುವಂತದ್ದಾದರೂ ಪತ್ನಿ-ಪತಿಯನ್ನು ಬಿಡಲು ಸೂಚಿಸಿದ ಕಾರಣಗಳು ಸಾಮಾನ್ಯವಾಗಿ ಜನಸಾಮಾನ್ಯರ ಕಣ್ಣಿಗೆ ಕಾಣುವಂತವಾಗಿರುತ್ತವೆ. ಜಾತಿ ಭ್ರಷ್ಟನಾದರೆ ದೇಶಾಂತರ ಹೋಗಿದ್ದರೆ, ಸನ್ಯಾಸ ಸ್ವೀಕರಿಸಿದರೆ ಇವುಗಳೆಲ್ಲ ಎಲ್ಲರಿಗೂ ತಿಳಿಯುತ್ತದೆ. ಆದರೆ ಮಕ್ಕಳಾಗದಿರುವುದಕ್ಕೆ ಅವನಲ್ಲಿರುವ ಲೋಪವೇ ಕಾರಣವಾಗಿರಬಹುದು. ಆದರೆ ಅವನು ಅವಳ ಮೇಲೆ ದೋಷ ಹೊರಿಸಿ ಅವಳನ್ನು ತ್ಯಜಿಸಬಹುದಾಗಿದೆ. ಹಾಗಾಗಿ ಕಾಟಿಲ್ಯನಲ್ಲಿಯು ಪುರುಷ ಪಕ್ಷಪಾತವನ್ನು ಗುರುತಿಸಬಹುದು. ಇಂತಹ ಕಾರಣಗಳೇ ಬೌದ್ಧಾಯಣನ ಧರ್ಮಶಾಸ್ತ್ರದಲ್ಲೂ, ಮನುಸ್ಮೃತಿಯಲ್ಲೂ ಕಾಣಬಹುದಾಗಿದೆ. ಬೌದ್ಧಾಯಣನು 'ಜಗಳ ಗಂಟಿ' ಹೆಂಡತಿಯನ್ನು ತಕ್ಷಣವೇ ತ್ಯಜಿಸಬೇಕು ಎನ್ನುವಲ್ಲಿ ಗಂಡನಾದವನು ಇಷ್ಟವಿಲ್ಲದ ಹೆಂಡತಿಯ ಬಗ್ಗೆ 'ಜಗಳ ಗಂಟಿ' ಎಂದು ಸುಳ್ಳು ಆರೋಪ ಹೊರಿಸಬಹುದಾಗಿದೆ ಅಥವಾ

ಅವನೇ ಜಗಳ ಮಾಡಿ ಹೆಂಡತಿಯ ಮೇಲೆ ಹಾಕಿ ಸುಲಭವಾಗಿ ಗಂಡನ ತಪ್ಪಿಗೆ ಹೆಂಡತಿಯನ್ನು ಹೊಣೆ ಮಾಡಬಹುದಾಗಿದೆ. ಹೆಣ್ಣು ಮಕ್ಕಳನ್ನೇ ಹೆತ್ತಿರುವಂಥ ತಾಯಿಯನ್ನು ತ್ಯಜಿಸಿ ಮತ್ತೊಂದು ಮದುವೆಯಾಗ ಬೇಕೆನ್ನುವ ಕಾರಣದಲ್ಲಿ ದೋಷಿ ತಂದೆಯಾಗಿರುತ್ತಾನಾದರೂ ದೋಷವನ್ನು ತಾಯಿಯ ಮೇಲೆ ಹಾಕಲಾಗಿದೆ. ಮಕ್ಕಳ ಸಾವಿಗೂ - ತಾಯಿಗೂ ಯಾವುದೇ ಬಗೆಯ ಸಂಬಂಧವಿಲ್ಲದಿದ್ದರೂ ಮಕ್ಕಳ ಸಾವಿನ ಜೊತೆ ಮಹಿಳೆಯನ್ನು ಸಮೀಕರಿಸಲಾಗಿದೆ. ಹೀಗೆ ಮಹಿಳೆಯರನ್ನು ತನ್ನದಲ್ಲದ ತಪ್ಪಿಗೆ ದೋಷಿಯನ್ನಾಗಿ ಮಾಡಲಾಗಿದೆ. ಅಲ್ಲದೆ ಪುರುಷರಿಗೆ ದೊರೆತಷ್ಟು ಬಿಡುಗಡೆಯ ಅವಕಾಶಗಳು ಮಹಿಳೆಯರಿಗೆ ಇಲ್ಲದಿರುವುದನ್ನು ಇಲ್ಲಿ ಗುರುತಿಸಬಹುದು.

ಉಲ್ಲೇಖಗಳು

೧. ವಿಶ್ವನಾಥ ಡಿ.ಎಸ್., ೨೦೦೫, ವಿವಾಹ V/s ವಿಚ್ಛೇದನೆ (ಶಾಶ್ವತ ವಿವಾಹವೋ-ವಿಚ್ಛೇದನವೊ), ಶ್ರೀ ಗಣೇಶ್ ಪಬ್ಲಿಕೇಷನ್ಸ್, ಬೆಂಗಳೂರು.

೨. ವಿಜಯಾ ದಬ್ಬೆ, ೧೯೮೮, ಮಹಿಳೆ ಸಾಹಿತ್ಯ ಸಮಾಜ, ರಚನಾ ಪ್ರಕಾಶನ, ಮೈಸೂರು.

೩. ಶೇಷ ನವರತ್ನ, ೨೦೦೫, ಮನುಸ್ಮೃತಿ, ಸಮಾಜ ಪುಸ್ತಕಾಲಯ, ಧಾರವಾಡ.

೪. ನಿರೂಪಮ, ೧೯೯೬, ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ, ಆರತಿ ಪಬ್ಲಿಕೇಷನ್ಸ್, ಮೈಸೂರು.

• • •

## ಅಧ್ಯಾಯ ೩

## ವಿಚ್ಛೇದನೆಗೆ ಕಾರಣಗಳು : ಮಹಿಳೆಯರನ್ನು ಅನುಲಕ್ಷಿಸಿ

ಗಂಡು-ಹೆಣ್ಣು ಮದುವೆಯಾದ ಮೇಲೆ ಒಟ್ಟಾಗಿ ಸಂಸಾರ ನಡೆಸುತ್ತಾರೆ. ಇವರ ವೈವಾಹಿಕ ಜೀವನದಲ್ಲಿ ಹೊಂದಾಣಿಕೆ, ಸಾಮರಸ್ಯವೇರ್ಪಡದೇ ಗಂಡು ಹೆಣ್ಣನ್ನು ಬಿಡುವ, ಹೆಣ್ಣು ಗಂಡನ್ನು ಬಿಡುವ ಸಂದರ್ಭವನ್ನೇ ವಿಚ್ಛೇದನೆ ಎನ್ನಬಹುದಾಗಿದೆ. ವಿವಾಹ ಬಂಧನ ಆಜೀವ ಪರ್ಯಂತ ಸತಿ-ಪತಿಯರನ್ನು ಬಂಧಿಸುವಂಥ ಒಂದು ವ್ಯವಸ್ಥೆ ಎನ್ನುವುದು ಪ್ರಚಲಿತವಾದ ನಂಬಿಕೆಯಾಗಿದ್ದರೂ ಎಲ್ಲಾ ವಿವಾಹ ಸಂಬಂಧಗಳನ್ನು ಈ ದೃಷ್ಟಿಕೋನದಿಂದ ವಿಶ್ಲೇಷಿಸುವುದು ಸಾಧ್ಯವಿಲ್ಲ.

ವೈವಾಹಿಕ ಬಂಧನದಲ್ಲಿ ಒಳಗಾಗಿರುವ ಪತಿ-ಪತ್ನಿಯರ ಮಧ್ಯೆ ಪರಸ್ಪರ ಹೊಂದಾಣಿಕೆ, ಗೌರವ, ವಿಶ್ವಾಸ ಈ ಅಂಶಗಳು ಕಂಡುಬಂದರೆ ವಿಚ್ಛೇದನೆಯ ಪ್ರಸ್ತಾಪವು ಬರುವುದಿಲ್ಲ. ಆದರೆ ಸಮಾಜದಲ್ಲಿ ಅಸ್ತಿತ್ವದಲ್ಲಿರುವಂಥ ಪುರುಷಪ್ರಧಾನ ವ್ಯವಸ್ಥೆಯು ಪರಸ್ಪರ ಹೊಂದಾಣಿಕೆ, ಗೌರವ, ವಿಶ್ವಾಸ ಈ ಅಂಶಗಳನ್ನು ಕೇವಲ ಮಹಿಳೆಯರಿಂದಲೇ ನಿರೀಕ್ಷಿಸುತ್ತದೆ. ಹಾಗಾಗಿ ವಿವಾಹ ಸಂಸ್ಥೆಯಡಿ ಮಹಿಳೆಯರು ನಾನಾ ಬಗೆಯ ಹಿಂಸೆಗಳಿಗೆ ಒಳಗಾಗಿದ್ದಾರೆ. ಪುರುಷಪ್ರಧಾನ ವ್ಯವಸ್ಥೆಯು ನಿರೀಕ್ಷಿಸುವ ಈ ಅಂಶಗಳೇ ಮಹಿಳೆಯರು ನಿರ್ವಹಿಸಬೇಕಾದ ಪ್ರಮುಖ ಕರ್ತವ್ಯಗಳು ಎಂಬಂಥ ಭಾವನೆಯನ್ನು ಸಮಾಜದ ಎಲ್ಲರೂ ಒಪ್ಪಿಕೊಳ್ಳುವಂಥ ಸ್ಥಿತಿ ನಿರ್ಮಾಣವಾಗಿದೆ. ಹಾಗಾಗಿ ಸ್ವತಃ ಮಹಿಳೆಯರೇ ಇವುಗಳನ್ನು ಒಪ್ಪಿಕೊಂಡು ನಡೆಯುತ್ತಿರುವಂಥ ಸ್ಥಿತಿಯು ನಮ್ಮ ಸಮಾಜದಲ್ಲಿ ಕಾಣಬಹುದಾಗಿದೆ. ಹೀಗೆ ಕಂಡು ಬರುತ್ತಿರುವ ಮಹಿಳೆಯರಲ್ಲಿನ ಈ ಭಾವನೆಯು ಕಾಲ ಬದಲಾದಂತೆ ಬದಲಾವಣೆಯಾಗುತ್ತಲಿರುವುದನ್ನು ಕಾಣ ಬಹುದಾಗಿದೆ. ಈ ಬದಲಾವಣೆಯಿಂದ ಮಹಿಳೆಯರು ವಿವಾಹ ಬಂಧನದಲ್ಲಿ ತಮಗಾಗುತ್ತಿರುವ ಅನ್ಯಾಯವನ್ನು ಅರಿಯತೊಡಗಿದ್ದಾರಲ್ಲದೆ, ಇದರಿಂದ ಹೊರಬರಲು 'ವಿಚ್ಛೇದನೆ' ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಭಾರತೀಯ ಸಮಾಜದಲ್ಲಿ ಕುಟುಂಬಕ್ಕೆ ಮೊದಲ ಪ್ರಾಶಸ್ತ್ಯ ನೀಡಲಾಗುತ್ತದೆ. ಕುಟುಂಬದಲ್ಲಿ ರುವವರು ಮಾನ-ಮರ್ಯಾದೆಯ ಹೆಸರಿನಲ್ಲಿ ವಿಚ್ಛೇದನೆ ಪ್ರಕ್ರಿಯೆಗೆ ಒಳಪಡದೇ ಇರುವಂಥ ಸ್ಥಿತಿಯು ಇದೆ. ಇದು ಸಾಮಾನ್ಯವಾಗಿ ಮಹಿಳೆಯರ ವಿಷಯದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಹೆಣ್ಣಿನ ತಂದೆ-

ತಾಯಂದಿರುಗಳು ಮಗಳು ಗಂಡನ ಮನೆಯಲ್ಲಿ ಹಿಂಸೆ ಅನುಭವಿಸುತ್ತಿದ್ದಾಳೆ ಎಂದು ತಿಳಿದಿದ್ದರೂ ಮಗಳನ್ನು 'ಹೊಂದಿಕೊಂಡು ಬಾಳು' ಎಂದು ಹೇಳುವುದುಂಟು. ಏಕೆಂದರೆ, ಗಂಡನಿಂದ ಮಗಳನ್ನು ಬೇರ್ಪಡಿಸಿದ್ದೇ ಆದರೆ ಸಮಾಜದಲ್ಲಿ ಅವಮಾನಕ್ಕೆ ಒಳಗಾಗುತ್ತೇವೆ ಎಂಬ ಕಾರಣಕ್ಕಾಗಿ, ಸ್ವತಃ ಪತ್ನಿಯಾದವಳೇ ಗಂಡನಿಂದ ಹಿಂಸೆಗೆ ಒಳಗಾಗಿದ್ದರೂ ಗಂಡನಿಂದ ಬೇರ್ಪಡಲು ಇಷ್ಟಪಡುವುದಿಲ್ಲ. ಏಕೆಂದರೆ 'ಗಂಡ ಬಿಟ್ಟವಳು' ಎಂದು ಸಮಾಜದಲ್ಲಿ ಅವಮಾನಕ್ಕೆ ಒಳಗಾಗುವೆನೆಂಬ ಆತಂಕದಿಂದ. ಇಂತಹ ಸ್ಥಿತಿ ಕಂಡು ಬಂದರೂ ಬದಲಾದ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರಲ್ಲಿ ಜಾಗೃತಿ ಮೂಡುತ್ತಲಿದೆ. ಹಿಂದೊಮ್ಮೆ ಕಷ್ಟಸಾಧ್ಯವಾಗಿದ್ದ ಶಿಕ್ಷಣ, ಉದ್ಯೋಗ, ಆರ್ಥಿಕ ಸ್ವಾವಲಂಬನೆ, ಆತ್ಮವಿಶ್ವಾಸ ಇಂದು ಮಹಿಳೆಯರಲ್ಲಿ ಮೂಡುತ್ತಲಿದೆ. ಹಾಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ವಿಚ್ಛೇದನೆ ಪ್ರಕ್ರಿಯೆಯಲ್ಲಿ ಕಂಡು ಬರುತ್ತಿರುವರು. ವಿವಾಹ ವಿಚ್ಛೇದನೆಗಾಗಿ ಮಹಿಳೆಯರು ಹಂಬಲಿಸುತ್ತಿದ್ದಾರೆಂದು ಭಾವಿಸಬೇಕಿಲ್ಲ. ಯಾಕೆ ಮಹಿಳೆಯರು ವಿಚ್ಛೇದನೆಗಾಗಿ ಹಂಬಲಿಸುತ್ತಿದ್ದಾರೆ ಎನ್ನುವುದಕ್ಕಿರುವ ಕಾರಣಗಳಾದರೂ ಯಾವುವು? ಅವರಿಗೆ ವಿವಾಹ ಸಂಸ್ಥೆಯಡಿಯಲ್ಲಿ ಒಳಗಾಗುತ್ತಿರುವ ಸಮಸ್ಯೆಗಳಾವುವು? ಆ ಸಮಸ್ಯೆಗಳ ಸ್ವರೂಪ ಯಾವ ಬಗೆಯಲ್ಲಿರುವುದು? ಎನ್ನುವುದನ್ನು ತಿಳಿಯುವುದು ಅತ್ಯಗತ್ಯ. ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ವಿಚ್ಛೇದನೆ ಪ್ರಕ್ರಿಯೆಯಲ್ಲಿ ಒಳಗಾಗಲು ಪ್ರಮುಖ ಕಾರಣಗಳೆಂದರೆ,

- ಲೈಂಗಿಕ ಕಿರುಕುಳ
- ಗಂಡನ ಕಿರುಕುಳ
- ವರದಕ್ಷಿಣೆ ಕಿರುಕುಳ
- ಅನುಮಾನಿಸುವ ಪ್ರವೃತ್ತಿ
- ಹೊಂದಾಣಿಕೆಯ ಸಮಸ್ಯೆ
- ವ್ಯಕ್ತಿತ್ವದ ಬಗ್ಗೆ ಆಸಕ್ತಿ
- ಇತರೆ ಕಾರಣಗಳು

- **ಲೈಂಗಿಕ ಕಿರುಕುಳ**

ಪುರುಷರು ಅನಾದಿಕಾಲದಿಂದಲೂ ಲೈಂಗಿಕತೆಯಲ್ಲಿ ಸ್ವಾತಂತ್ರ್ಯವನ್ನು ಹೊಂದಿರುವರು. ಅವರು ಎಲ್ಲೆಂದರಲ್ಲಿ ಹೇಗೆ ಬೇಕೋ ಹಾಗೆ ಹೆಂಡತಿಯನ್ನು ಬಲವಂತದಿಂದಾದರೂ ಉಪಯೋಗಿಸಿಕೊಳ್ಳುತ್ತಾರೆ. ತಮ್ಮ ಸುಖಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುವ ಪುರುಷರು ಹೆಂಡತಿ ದಣಿದಿದ್ದಾಳೆ ಎನ್ನುವುದನ್ನು ಪರಿಗಣಿಸದೇ ಲೈಂಗಿಕತೆಯಲ್ಲಿ ಆಸಕ್ತಿ ತೋರಿಸುತ್ತಾರೆ. ಇದನ್ನು ಹೆಂಡತಿ ನಿರಾಕರಿಸಿದ್ದೆಯಾದರೆ ಬಲವಂತವಾಗಿಯಾಗಲಿ ತಮ್ಮ ಬಯಕೆಯನ್ನು ಪೂರೈಸಿಕೊಳ್ಳುತ್ತಾರೆ. ವಿಕೃತ ಕಾಮಿಗಳಾದ ಕೆಲವು ಪುರುಷರು

ಅಸಭ್ಯವಾಗಿ ಹೆಂಡತಿಯ ಬಳಿ ವರ್ತಿಸುತ್ತಾರಲ್ಲದೆ ಅವಳನ್ನು ಹಾಗೆ ವರ್ತಿಸುವಂತೆ ಬಲವಂತಪಡಿಸುತ್ತಾರೆ. ಹಾಗೇ ಮಾಡದೇ ಹೋದಾಗ ಹೊಡೆಸಿಕೊಳ್ಳಬೇಕೆಂಬ ಕಾರಣಕ್ಕೆ ಹೆಂಡತಿಯರು ಗಂಡ ಹೇಳುವಂತೆ ತಮಗೆ ಹಿಂಸೆಯಾದರೂ ಸಹಿಸಿಕೊಂಡು ಗಂಡ ಬಯಸಿದ ಬಗೆಯಲ್ಲಿ ವರ್ತಿಸುತ್ತಾರೆ. ಕೆಲವು ಪತ್ರಿಕೆಯಲ್ಲಿ ಬಂದ ವರದಿಯ ಪ್ರಕಾರ ಕೆಲವು ಗಂಡಂದಿರು ಅಶ್ಲೀಲ ಛಾಯಾಚಿತ್ರಗಳನ್ನು (ಬ್ಲೂಫಿಲ್ಮ್) ಮನೆಯಲ್ಲಿ ಹಾಕಿ ಅದರಂತೆ ವರ್ತಿಸುವುದುಂಟು. ಇದರಿಂದ ಮಹಿಳೆಯರಿಗೆ ಹಿಂಸೆಯಾಗುತ್ತದೆ ಎಂದು ತಿಳಿದಿದ್ದರೂ ಅವರು ಹಿಂಸೆ ಪಡುವುದನ್ನು ನೋಡಿ ತಾವು ಸಂತೋಷ ಪಡುತ್ತಿರುವ ಪುರುಷರೂ ಇದ್ದಾರೆ.

ಲೈಂಗಿಕತೆಯಲ್ಲಿ ಹೆಂಡತಿಯು ಗಂಡನಿಗೆ ಸಹಕಾರ ನೀಡದೇ ಇದ್ದಾಗ ಅವಳಿಗೆ ಬೇರೊಬ್ಬನ ಜೊತೆ ಸಂಬಂಧ ಕಟ್ಟಿ, 'ನಿನಗೆ ಅವನ ಜೊತೆ ಸಂಬಂಧವಿದೆ. ಅದಕ್ಕೆ ನನಗೆ ಸಹಕಾರ ನೀಡೋದಿಲ್ಲ' ಎಂದು ಕೂಗಾಡುವ ಮೂಲಕ ಕೆಟ್ಟ ರೀತಿಯ ಅಶ್ಲೀಲ ಪದಗಳಿಂದ ಬೈಯುವುದೂ ಲೈಂಗಿಕ ಕಿರುಕುಳ ಆಗುತ್ತದೆ. ಹೆಂಡತಿಯನ್ನು ಬೈಯುವುದರ ಜೊತೆಗೆ ಅವರ ತವರು ಮನೆಯವರನ್ನು ಅಶ್ಲೀಲ ಶಬ್ದಗಳಿಂದ ಬೈಯುವುದುಂಟು.

ಪತ್ನಿಯಾದವಳು ಪತಿಯ ಮನೆಯಲ್ಲಿ ಲೈಂಗಿಕ ಕಿರುಕುಳಕ್ಕೆ ಒಳಗಾಗಿದ್ದಾಳೆಂದರೆ ಅದು ಕೇವಲ ಪತಿಯಿಂದ ಮಾತ್ರ ಸಂಭವಿಸುತ್ತದೆ ಎಂದು ಹೇಳಲಾಗದು. ಗಂಡನ ಮನೆಯ ಇತರೇ ಪುರುಷ ಸದಸ್ಯರು ಅವಳ ಮೇಲೆ ಲೈಂಗಿಕ ಕಿರುಕುಳ ನೀಡಬಹುದು. ಗಂಡನ ತಂದೆ, ಗಂಡನ ಅಣ್ಣ-ತಮ್ಮಂದಿರು ಇನ್ನೂ ಮುಂತಾದ ಪುರುಷರನ್ನು ಇಲ್ಲಿ ಗುರುತಿಸಬಹುದು. ಭಾರತೀಯ ಸಮಾಜದಲ್ಲಿ ವಿವಾಹಿತ ಮಹಿಳೆಯ ಮೇಲೆ ಆಕೆಯ ಗಂಡನ ಅಣ್ಣ-ತಮ್ಮಂದಿರು ಲೈಂಗಿಕ ಕಿರುಕುಳ ನೀಡುತ್ತಾರೆಂದರೆ ಒಪ್ಪಬಹುದೇನೋ. ಆದರೆ ಗಂಡನ ತಂದೆ ಅಂದರೆ ಅವಳ ಮಾವ ಅವಳನ್ನು ಲೈಂಗಿಕ ಕಿರುಕುಳಕ್ಕೆ ಒಳಪಡಿಸುತ್ತಿದ್ದಾನೆ ಎನ್ನುವುದನ್ನು ಒಪ್ಪುವುದು ಕಷ್ಟ. ಸಮಾಜದೆದುರು ಒಳ್ಳೆಯವನಾಗಿ ಗುರುತಿಸಿಕೊಳ್ಳುವ ಮಾವ ಒಳ ಒಳಗೆ ಅವಳಿಗೆ ಯಾರಿಗೂ ಗೊತ್ತಾಗದ ರೀತಿಯಲ್ಲಿ ಹಿಂಸಿಸುತ್ತಾನೆ. ಈ ಕುರಿತು ಅವಳು ಯಾರಿಗೂ ಹೇಳದಂಥ ಸ್ಥಿತಿಯನ್ನು ನಿರ್ಮಿಸಿರುತ್ತಾನೆ. ಒಂದು ವೇಳೆ ಹೇಳಿದರೂ ಯಾರು ನಂಬುವುದಿಲ್ಲ. ಈ ಕಾರಣದಿಂದ ಅವಳೇ ಅವಮಾನಕ್ಕೆ ಒಳಗಾಗುತ್ತಾಳೆ. ತಂದೆ-ತಾಯಿಂದಿರಿಂದ ಮಗನನ್ನು ದೂರ ಮಾಡು ವುದಕ್ಕಾಗಿ ಈ ರೀತಿ ಸುಳ್ಳು ಅಪಾದನೆಯನ್ನು ಅವರ ಮೇಲೆ ಹೋರಿಸುತ್ತಿದ್ದಾಳೆ ಎಂದು ಅವಳನ್ನೇ ಬೈಯುವಂತೆ ಪ್ರಸಂಗಗಳು ಕಂಡು ಬರುತ್ತವೆ. ಈ ಕುರಿತು ಗಂಡನಿಗೆ ಹೇಳಿದರೂ ಅವನಿಂದ ಅವಳಿಗೆ ದೊರಕುವುದು ಹೊಡೆತಗಳ ಸುರಿಮಳೆ. ಇನ್ನೂ ಗಂಡನ ಅಣ್ಣ-ತಮ್ಮಂದಿರುಗಳಿಂದ ಮಹಿಳೆ ಲೈಂಗಿಕ ಕಿರುಕುಳಕ್ಕೆ ಒಳಗಾಗಿದ್ದರೆ, ಅಂತಹ ಸಂದರ್ಭಗಳನ್ನು ಒಪ್ಪುವ ಮನೋಭಾವದವರಿಗಿಂತ ಒಪ್ಪದೇ ಇರುವಂಥ ಮನೋಭಾವದವರೇ ನಮ್ಮಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ.

ದೀರ್ಘಕಾಲದವರೆಗೂ ವಿವಾಹ ಬಂಧನದಲ್ಲಿ ಇದ್ದು, ವಯಸ್ಸಾದ ನಂತರವೂ ಮಹಿಳೆಯರು ವಿಚ್ಛೇದನೆಯ ಹಂತಕ್ಕೆ ಬಂದಿರುವುದುಂಟು. ಆದರೆ ಸಂಖ್ಯೆಯ ದೃಷ್ಟಿಯಿಂದ ಅತಿ ಕಡಿಮೆ. ವಯಸ್ಸಾದ

ಮಹಿಳೆಯರಲ್ಲಿ ವಿಚ್ಛೇದನೆ ಪಡೆಯಬೇಕೆಂಬ ಭಾವನೆ ಮೂಡಲು ಕಾರಣ ಲೈಂಗಿಕ ಕಿರುಕುಳವಾಗಿದೆ. ವಯಸ್ಸಾದ ಮಹಿಳೆಯರಲ್ಲಿ ಲೈಂಗಿಕ ಆಸಕ್ತಿ ಕಂಡು ಬರುವುದಿಲ್ಲ ಅಥವಾ ಕಡಿಮೆ ಇರುತ್ತದೆ. ಅವರಿಗೆ ಮಕ್ಕಳನ್ನು ಹೆತ್ತಿದ್ದರಿಂದಲೋ, ವಯಸ್ಸಾಗಿದೆ ಎನ್ನುವ ಕಾರಣಕ್ಕೊ ಆಸಕ್ತಿ ಕಂಡು ಬರುವುದಿಲ್ಲ. ಆದರೆ ಪುರುಷರಲ್ಲಿ ಈ ಮನೋಭಾವ ಕಂಡು ಬರುವುದಿಲ್ಲ. ಹಾಗಾಗಿ ಲೈಂಗಿಕ ಬಯಕೆಯನ್ನು ಪೂರೈಸಿಕೊಳ್ಳಲು ಹೆಂಡತಿಯನ್ನು ಹಿಂಸಿಸುವುದುಂಟು. ಈ ಹಿಂಸೆಯನ್ನು ಸಹಿಸದ ಮಹಿಳೆ ಅಂತಹ ದಾಂಪತ್ಯ ಜೀವನದಿಂದ ಹೊರಬರಲು ಬಯಸುವುದುಂಟು.

ವಿವಾಹಿತ ಮಹಿಳೆಯರು ಗಂಡನ ಮನೆಯಲ್ಲಿ ಗಂಡನಿಂದ ಅಥವಾ ಮನೆಯ ಇತರೆ ಸದಸ್ಯರಿಂದ ಅನುಭವಿಸುವ ಲೈಂಗಿಕ ಕಿರುಕುಳ ಅವರ ಪಾಲಿಗೆ ದೇಹಕ್ಕೆ ಗಾಯ ಮಾಡುವುದರ ಜೊತೆಗೆ ಮಾನಸಿಕ ಘಾಸಿಯನ್ನುಂಟುಮಾಡುತ್ತದೆ. ಗಂಡನ ಮನೆಯಲ್ಲಿ ತಾವು ಅನುಭವಿಸುವ ಲೈಂಗಿಕ ಕಿರುಕುಳವನ್ನು ತಮ್ಮ ತಾಯಿಯ ಹತ್ತಿರ ಹೇಳಿಕೊಳ್ಳಲಾರದೇ ತಮ್ಮಲ್ಲಿಯೇ ಚಡಪಡಿಸುತ್ತಿರುವ ಮಹಿಳೆಯರು, ಈ ಹಿಂಸೆಯನ್ನು ತಾಳಲಾರದಂಥ ಸಂದರ್ಭದಲ್ಲಿ ಇಂತಹ ಜೀವನದಿಂದ ಹೊರಬರಲು ಬಯಸುವುದುಂಟು.

• **ಗಂಡನ ಕಿರುಕುಳ**

'ಕಿರುಕುಳ ಕೊಡುವುದು ಗಂಡನ ಹಕ್ಕು'. 'ಕಿರುಕುಳ ಅನುಭವಿಸುವುದು ಹೆಂಡತಿಯ ಕರ್ತವ್ಯ' ಇವು ನಮ್ಮ ಸಮಾಜದಲ್ಲಿರುವ ರೂಢಿಗತ ಅನಿಷ್ಟ ನುಡಿಗಳು. ಈ ರೀತಿಯಾಗಿ ಗಂಡನಿಂದ ಹೆಂಡತಿಯು ಅನುಭವಿಸುವ ಹಿಂಸೆಯು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಇದೆ. ತಾನು ಶ್ರೇಷ್ಠ ತಾನು ಮಾಡುವುದೆಲ್ಲ ಸರಿ ಎನ್ನುವ ಮನೋಭಾವನೆಯ ಪುರುಷರು ಮಹಿಳೆಯರನ್ನು ತಮಗಿಂತ ಕೆಳಗಿನವರು; ಅವರು ಸದಾಕಾಲ ನಮ್ಮ ಹಿಡಿತದಲ್ಲಿಯೇ ಇರಬೇಕು; ಎಂದು ಬಯಸುತ್ತಾರೆ. ಮಹಿಳೆಯರು ಪುರುಷರು ಹೇಳಿದಂತೆ ನಡೆದರೂ, ನಡೆಯದಿದ್ದರೂ ಅವಳಿಗೆ ಹಿಂಸೆ ಮಾತ್ರ ತಪ್ಪುವುದಿಲ್ಲ. ಗಂಡನಾದವನು ನೀಡುವ ಹಿಂಸೆಯನ್ನು ದೈಹಿಕ ಹಿಂಸೆ, ಮಾನಸಿಕ ಹಿಂಸೆ ಎಂದು ಎರಡು ಬಗೆಯಲ್ಲಿ ಗುರುತಿಸಬಹುದಾಗಿದೆ.

ಗಂಡ ನೀಡುವ ದೈಹಿಕ ಹಿಂಸೆಯನ್ನು ಕಂಡು ಹಿಡಿಯುವುದು ಸುಲಭ. ಆದರೆ ಮಾನಸಿಕ ಹಿಂಸೆಯನ್ನು ಅಳೆಯುವುದೆಂತು? ಭಾರತಕ್ಕೆ ಸ್ವಾತಂತ್ರ್ಯ ಬಂದು ಅರುವತ್ತು ವರ್ಷಗಳು ಆದರೂ ಮಹಿಳೆ ತಾನು ಸ್ವತಂತ್ರಳೋ ಅಲ್ಲವೋ ಎನ್ನುವ ಗೊಂದಲದಲ್ಲಿಯೇ ಇದ್ದಾಳೆ. ಮಹಿಳೆ ಪುರುಷರಿಗೆ ಎಲ್ಲ ರೀತಿಯಿಂದಲೂ ಸಮಾನಳು ಎನ್ನುವ ಮಾತು ವಿಭಿನ್ನ ಕ್ಷೇತ್ರಗಳಲ್ಲಿ ಆಕೆಗಾಗುತ್ತಿರುವ ದೌರ್ಜನ್ಯದಿಂದ ತಪ್ಪು ಎನ್ನುಮಂತಾಗಿದೆ. ಇಂದಿಗೂ ದಿನನಿತ್ಯದ ಕೆಲಸ ಕಾರ್ಯಗಳನ್ನು ಕೂಡ ತನ್ನ ಗಂಡನ ಅನುಮತಿ ಪಡೆದೇ ಮಾಡಬೇಕಾದ ಅನಿವಾರ್ಯತೆ ಅನೇಕ ಮಹಿಳೆಯರಿಗಿದೆ.

ಗಂಡ ನೀಡುವ ದೈಹಿಕ ಹಿಂಸೆ ಸಾಮಾನ್ಯವಾಗಿ ಬಡವರ ಮನೆಯಲ್ಲಿ ಹಾಗೂ ಅನಕ್ಷರಸ್ಥರಲ್ಲಿ ಕಂಡು ಬರುತ್ತದೆ ಎನ್ನುವ ತಪ್ಪು ಕಲ್ಪನೆ ಇದೆ. ಆದರೆ ಈ ಹಿಂಸೆ ಎಲ್ಲಾ ಸಾಮಾಜಿಕ, ಆರ್ಥಿಕ ವರ್ಗಗಳಲ್ಲಿಯೂ ಕಂಡು ಬರುತ್ತದೆ. ಹಿಂಸೆ ಎಂದು ಯಾವುದೋ ಒಂದನ್ನು ಗುರುತಿಸಲಾಗದು. ಕೌಟುಂಬಿಕ

ವ್ಯವಸ್ಥೆಯೊಳಗೆ ಒಂದು ಹೆಣ್ಣಿನ ಇಚ್ಛೆಯ ವಿರುದ್ಧ ನಡೆಯುವ ಎಲ್ಲ ಘಟನೆಗಳು ಹಿಂಸೆಯಾಗಿರುತ್ತದೆ. ಕೆಳವರ್ಗಗಳಲ್ಲಿ ಮಹಿಳೆಯರು ಅನುಭವಿಸುವ ಈ ಹಿಂಸೆ ಸಾಮಾನ್ಯವಾಗಿ ಕಣ್ಣಿಗೆ ಕಾಣಿಸುವಂತೆ ಇರುತ್ತದೆ. ಆದರೆ ಮಧ್ಯಮವರ್ಗ, ಶ್ರೀಮಂತ ವರ್ಗಗಳಲ್ಲಿ ನಡೆಯುವ ಹಿಂಸೆಯು ಕಣ್ಣಿಗೆ ಕಾಣದ ರೀತಿಯಲ್ಲಿ ನಡೆಯುತ್ತಿರುತ್ತದೆ. ಸಿಗರೇಟ್, ಬೀಡಿಗಳಿಂದ ಸುಡುವುದು, ಕೈಯಿಂದಲೋ ಕೋಲಿನಿಂದಲೋ ಅಥವಾ ಇತರೇ ವಸ್ತುವಿನಿಂದ ಹೊಡೆಯುವುದು, ಕಬ್ಬಿಣದ ರಾಡನ್ನು ಕಾಸಿ ಮೈಮೇಲೆಲ್ಲ ಬರೆ ಹಾಕುವುದು, ಬ್ಲೇಡಿನಿಂದಲೋ ಅಥವಾ ಚಾಕುವಿನಿಂದಲೋ ಮೈಮೇಲೆ ಗಾಯ ಮಾಡಿ ಆ ಗಾಯದ ಮೇಲೆ ಖಾರದಪುಡಿ ಅಥವಾ ಉಪ್ಪನ್ನು ಹಾಕುವುದು, ಕೈಗಳ ಮೇಲೆ ಬೆಂಕಿಯ ಕೆಂಡಗಳನ್ನು ಹಾಕುವುದು. ಇವೆಲ್ಲ ದೈಹಿಕ ಹಿಂಸೆಯ ಬಗೆಗಳಾಗಿವೆ. ಗಂಡನಾದವನು ಹೆಂಡತಿಗೆ ದೈಹಿಕ ಹಿಂಸೆ ನೀಡಲು ಇಂತಹದೇ ಕಾರಣವಿರ ಬೇಕೆಂದೇನೂ ಇಲ್ಲ. ಊಟದಲ್ಲಿ ವಿಷ ಬೆರೆಸುವ ಗಂಡ ಅದನ್ನು ಅವಳಿಗೆ ತಿನ್ನು ಎನ್ನುತ್ತಾನೆ, ಇಲ್ಲವೆಂದರೆ ಹೊಡೆಯುತ್ತಾನೆ. ಇಲ್ಲವಾದರೆ ಸುಡುತ್ತಾನೆ. ಹೊರಗಡೆ ತರಕಾರಿ ತರಲು ಅಥವಾ ಇತರೆ ಯಾವುದೇ ಕೆಲಸಕ್ಕೆ ಹೋದ ಹೆಂಡತಿ ಗಂಡ ನಿಗದಿಪಡಿಸಿದ ಸಮಯಕ್ಕೆ ಬರಲಿಲ್ಲವೆಂಬ ಕಾರಣಕ್ಕೆ ಗೊತ್ತಿರುವ ಅಥವಾ ಗೊತ್ತಿಲ್ಲದೇ ಇರುವ ಪುರುಷರು ಯಾವುದೋ ಕೆಲಸದ ನಿಮಿತ್ತ ಮಾತಾಡಿಸಿದರೆ ಅವರ ಜೊತೆ ಮಾತಾಡಿದ್ದೇ ಅಪರಾಧವೆನ್ನುವ ಕಾರಣಕ್ಕೆ, ಊಟೋಪಚಾರದಲ್ಲಿ ಸರಿಯಾಗಿ ಮಾಡಿಲ್ಲ ಎನ್ನುವ ಕಾರಣಕ್ಕೆ, ಸಂಸಾರದ ಖರ್ಚಿಗೆಂದು ಕೊಟ್ಟ ಹಣದಲ್ಲಿ ವ್ಯತ್ಯಾಸವಾದ ಕಾರಣಕ್ಕೆ ಹೀಗೆ ಒಂದಲ್ಲ ಒಂದು ಕಾರಣವನ್ನು ಕಂಡು ಹಿಡಿಯುವ ಪುರುಷರು ಹೆಂಡತಿಯರಿಗೆ ದೈಹಿಕ ಹಿಂಸೆ ನೀಡುತ್ತಾರೆ. ನಿನ್ನೆ ಯಾಕೆ ಹೀಗೆ ಮಾಡಿದೆ ಎಂದು ಮರುದಿನ ಹೊಡೆಯುತ್ತಾರೆ. ಆವತ್ತೂ ಯಾಕೆ ಹೀಗೆ ಮಾಡಿದ್ದು ಎಂದು ಮತ್ತಾವತ್ತೊ ಹೊಡೆಯುತ್ತಾರೆ. ಹೀಗೆ ಹಿಂಸಿಸುವ ಗಂಡಂದಿರು ಹೆಂಡತಿಯರನ್ನು ಹೊಡೆಯುವುದೇ ತಮ್ಮ ಕೆಲಸವೆಂದು ಭಾವಿಸಿಬಿಟ್ಟಿರುತ್ತಾರೆ.

ಪತಿ-ಪತ್ನಿಯರ ನಡುವಿನ ನವಿರಾದ ಸಂಬಂಧದಲ್ಲಿ ನಾನಾ ತರಹದ ಕೃತ್ಯಗಳು ಕ್ರೂರವೆನಿಸಿ ಕೊಳ್ಳಬಹುದು. ಜೀವನ ಹೆಚ್ಚು ಹೆಚ್ಚು ಸಂಕೀರ್ಣವಾಗುತ್ತಾ ಹೋದ ಹಾಗೆ ಹಿಂಸೆಯ ಸ್ವರೂಪದಲ್ಲಿಯೂ ಬದಲಾವಣೆಗಳಾಗುತ್ತಿವೆ. ಅಮಲು ಪದಾರ್ಥ (ಮದ್ಯಪಾನೀಯ) ಸೇವಿಸುವ ಗಂಡಂದಿರದ್ದು ಇನ್ನೊಂದು ಕತೆ. ಕುಡಿದು ಕುಡಿದು ಹೆಂಡತಿ ಮಕ್ಕಳ ಚಿಂತೆ ಇಲ್ಲದೆ ದುಡಿದ ಹಣವನ್ನೆಲ್ಲ ಹಾಳು ಮಾಡುತ್ತಾರೆ. ಸಂಸಾರ ನಡೆಸಲು ಹೆಂಡತಿ ಹಣ ಕೇಳಿದರೆ ಹೊಡೆಯುತ್ತಾರೆ. ಕೆಳವರ್ಗದಲ್ಲಿ ಗಂಡ-ಹೆಂಡತಿ ಇಬ್ಬರೂ ಕೂಲಿ ಕೆಲಸಕ್ಕೆ ಹೋಗುವುದು ಸರ್ವೇಸಾಮಾನ್ಯ. ಯಾವಾಗ ಹೆಂಡತಿ ಕೆಲಸಕ್ಕೆ ಹೋಗಲು ಪ್ರಾರಂಭಿ ಸುತ್ತಾಳೋ ಆಗ ಗಂಡನು ತನ್ನ ಹಣವನ್ನು ಮನೆಯ ಖರ್ಚಿಗೆ ಕೊಡುವುದಿಲ್ಲ. ಹೆಂಡತಿಯು ತನ್ನ ಹಣದಿಂದಲೇ ಮನೆಯನ್ನು ನಿಭಾಯಿಸಿಕೊಳ್ಳುತ್ತಾಳೆ. ಗಂಡನು ತನ್ನ ಹಣದಿಂದ ಕುಡಿತದ ಚಟಕ್ಕೆ ಬಿದ್ದು ಕೆಲಸಕ್ಕೆ ಹೋಗುವುದನ್ನು ನಿಲ್ಲಿಸಿ, ಹೆಂಡತಿಯನ್ನು ಕುಡಿಯುವುದಕ್ಕಾಗಿ ಹಣ ಕೊಡಲು ಪೀಡಿಸುತ್ತಾನೆ. ಕೊಡದೇ ಹೋದಂತಹ ಸಂದರ್ಭದಲ್ಲಿ ಅವಳನ್ನು ಹೊಡೆಯುವುದು, ಕೂದಲಿಡಿದು ಎಳೆಯುವುದು, ಮಾಡಿದ ಅಡುಗೆಯನ್ನು ಚೆಲ್ಲಿ ಅವಳು ಉಪವಾಸ ಇರುವಂತೆ ಮಾಡುತ್ತಾನೆ. ಇನ್ನೂ ಕೆಲವು ಗಂಡಂದಿರು

ಬಿಸಿಯಾಗಿರುವಂತಹ ಕಾಫಿ, ಟೀಯನ್ನು ಗಂಟಲಿಗೆ ಸುರಿಯುವುದುಂಟು. ಕಣ್ಣಿಗೆ ಖಾರದಪುಡಿಯನ್ನು ಹಾಕುವುದು, ಹೆಂಡತಿಯ ಮೈಮೇಲಿನ ಒಡವೆಗಳನ್ನು ಕೊಡುವಂತೆ ಬಲವಂತ ಮಾಡುವುದು, ಕೊಡದೇ ಹೋದರೆ ಹೊಡೆಯುವುದು. ಹೀಗೆ ನಾನಾ ಬಗೆಯಲ್ಲಿ ದೈಹಿಕ ಹಿಂಸೆ ನೀಡುವುದು ಕಂಡು ಬರುತ್ತದೆ. ಯಾವುದೇ ಮಹಿಳೆಯು ಮೇಲೆ ದೈಹಿಕ ಹಿಂಸೆಯಾಗಿದೆ ಎಂದು ಸುಲಭವಾಗಿ ಕಂಡು ಹಿಡಿಯಬಹುದು. ಆದರೆ ಮಾನಸಿಕ ಹಿಂಸೆಯನ್ನು ಕಂಡು ಹಿಡಿಯಲು ಸಾಧ್ಯವಿಲ್ಲ. ಗಂಡನಾದವನು ಏನೇನೊ ಊಹೆಗಳನ್ನು ಮಾಡಿಕೊಂಡು ತನ್ನ ಹೆಂಡತಿ ವ್ಯಭಿಚಾರ ಮಾಡುತ್ತಾಳೆ ಎಂದು ಊಹಿಸಿ ಆಕೆಗೆ ಮಾನಸಿಕವಾಗಿ ಚಿತ್ರಹಿಂಸೆ ನೀಡುತ್ತಾನೆ. ಮಾನಸಿಕ ಹಿಂಸೆ ಯಾವ ಬಗೆಯಲ್ಲಿರುತ್ತದೆ ಎನ್ನುವುದಕ್ಕೆ ಗೀತಾಕೃಷ್ಣಮೂರ್ತಿಯವರು ತಮ್ಮ "ಮಹಿಳೆ ಸಮಾಜ ಕಾನೂನು" ಎಂಬ ಗ್ರಂಥದಲ್ಲಿ ಒಂದು ಉದಾಹರಣೆಯನ್ನು ಈ ರೀತಿ ನೀಡುತ್ತಾರೆ. ಸರ್ಕಾರಿ ಕಛೇರಿಯೊಂದರಲ್ಲಿ ಗುಮಾಸ್ತನಾಗಿದ್ದ ಒಬ್ಬನು ಹುಡುಗಿಯ ರೂಪವನ್ನು ಮೆಚ್ಚಿ ವರದಕ್ಷಿಣೆಗೆ, ವರೋಪಚಾರ ಏನು ತೆಗೆದುಕೊಳ್ಳದೇ ವಿವಾಹವಾಗುತ್ತಾನೆ. ವಿವಾಹವಾದ ಸ್ವಲ್ಪ ದಿನಕ್ಕೇನೆ ವರದಕ್ಷಿಣೆಗೆ ತೆಗೆದುಕೊಳ್ಳದೇ ಅವಳನ್ನು ವಿವಾಹವಾದದ್ದು ತಪ್ಪು ಎನಿಸತೊಡಗಿ, ಅವಳ ಬಗೆಗಿನ ಅಸಮಾಧಾನ ಹೆಪ್ಪುಗಟ್ಟುತ್ತಾ ಹೋಯಿತು. ಕಾರಣವಿಲ್ಲದೆ ನಿಂದಿಸುವುದು, ಇಲ್ಲದ ಅಪವಾದಗಳನ್ನು ಹೊರಿಸುವುದು ಸಾಮಾನ್ಯವಾಗಿತ್ತು. ಸುಖಿ ಸಂಸಾರದ ಕನಸು ಕಂಡಿದ್ದ ಹುಡುಗಿಯ ಆಸೆಗೆ ನೀರೆರಚಿದಂತಾಯಿತು. ಅವಳು ಹೊರಗೆ ನಿಂತರೆ ಯಾರನ್ನು ನೋಡಲು ನಿಂತಿರುವೆ ಎಂದು ನಿಂದಿಸುವುದು, ಮಾರುಕಟ್ಟೆಗೆ ಹೋದಾಗ ಅವಳ ಸಹಪಾಠಿ ಯಾರಾದರೂ ಪುರುಷರು ಮಾತಾಡಿಸಿದರೂ ಅವರ ಜೊತೆ ಸಂಬಂಧ ಕಟ್ಟುವುದು. ಮನೆಯಲ್ಲಿ ಒಬ್ಬಳನ್ನೇ ಬಿಟ್ಟು ಹೋಗಲು ಸಂಶಯ - ಹೀಗೆ ಒಂದಲ್ಲ ಒಂದು ಬಗೆಯಲ್ಲಿ ಅವಳನ್ನು ನಿಂದಿಸುವುದು, ಸಂಶಯಿಸುವ ಮೂಲಕ ಮಾನಸಿಕವಾಗಿ ಹಿಂಸಿಸಿರುವುದು ಇದರಿಂದ ತಿಳಿದು ಬರುತ್ತದೆ.

ಕೆಲವು ಸಂದರ್ಭಗಳಲ್ಲಿ ಪತಿ-ಪತ್ನಿಯರ ಮಧ್ಯೆ ವಯಸ್ಸಿನ ಅಂತರ ತುಂಬಾ ಹೆಚ್ಚು ಇದ್ದಾಗ ಪತಿಗೆ ಪತ್ನಿಯ ಮೇಲೆ ಸಂಶಯ ಪ್ರಾರಂಭವಾಗುತ್ತದೆ. ಹೊರಗಿನ ಪ್ರಪಂಚಕ್ಕೆ ಅವಳ ಜೊತೆ ಉತ್ತಮವಾಗಿ ಜೀವನ ಸಾಗಿಸುತ್ತಿರುವಂತೆ ನಟನೆ ಮಾಡಿ ಒಳ ಒಳಗೆ ಅವಳಿಗೆ ಹಿಂಸೆ ಕೊಡುತ್ತಿರುತ್ತಾರೆ. ಮನೆಗೆ ಹೋಗಿ ಬರುವವರ ಜೊತೆ ಅನೈತಿಕ ಸಂಬಂಧವಿದೆ ಎನ್ನುತ್ತಾ ವಿಚಿತ್ರವಾದ ಆನಂದವನ್ನು ಪಡೆಯುತ್ತಿರುತ್ತಾರೆ. ಇನ್ನೂ ಕೆಲವು ಗಂಡಂದಿರು ಹೆಂಡತಿಯರನ್ನು ಬೈಯುವಂಥ ಪ್ರಸಂಗಗಳು ಕಂಡು ಬರುತ್ತವೆ. ಈ ರೀತಿಯ ಬೈಗಳು ಹೆಂಡತಿಯರ ಮನಸ್ಸಿನ ಮೇಲೆ ತೀವ್ರ ಸ್ವರೂಪ ಹಿಂಸೆಯನ್ನು ಅನುಭವಿಸುವಂತೆ ಮಾಡುತ್ತವೆ. ಅನಾರೋಗ್ಯ ಅಥವಾ ಅಂಗವಿಕಲತೆಯನ್ನು ಹೊಂದಿರುವಂತಹ ಗಂಡಂದಿರಿಗೆ, ಹೆಂಡತಿಯರ ಮೇಲೆ ಸಂಶಯ. ಅವರು ನಕ್ಕರೂ ಕಷ್ಟ, ಕೂತರೂ ಕಷ್ಟ. ಯಾವುದಾದರೂ ಕೆಲಸದ ಮೇಲೆ ಹೊರಹೋಗಿ ಬಂದರೆ ಅದಕ್ಕೆ ಅನೈತಿಕ ಸಂಬಂಧವನ್ನು ಕಟ್ಟುತ್ತಾರೆ. ದೈಹಿಕವಾಗಿ ಹಿಂಸೆ ನೀಡಲು ಅಸಮರ್ಥರಾದ ಇವರು ಅವಾಚ್ಯ ಪದಗಳಿಂದ ಹೆಂಡತಿಯನ್ನು ಮಾನಸಿಕ ಹಿಂಸೆಗೆ ಒಳಪಡಿಸುತ್ತಾರೆ.

ಗಂಡನಿಂದ ದೈಹಿಕ ಹಾಗೂ ಮಾನಸಿಕ ಈ ಎರಡು ಹಿಂಸೆಯನ್ನು ಅನುಭವಿಸುತ್ತಿರುವ ಮಹಿಳೆಯರೂ ನಮ್ಮಲ್ಲಿ ಕಂಡು ಬರುತ್ತಾರೆ. ಕೆಲವು ಸಂದರ್ಭದಲ್ಲಿ ದೈಹಿಕ ಹಿಂಸೆಯ ಸ್ವರೂಪವು ತುಂಬಾ ಕ್ರೂರ ವಿಕೃತವಾಗಿರುತ್ತದೆ. ವಿಕೃತ ಮನಸ್ಸಿನ ಪುರುಷರು ತಮ್ಮ ಬಯಕೆಯನ್ನು ಈಡೇರಿಸಿಕೊಳ್ಳುವಲ್ಲಿ ಮಹಿಳೆಯರನ್ನು ಕೆಟ್ಟ ರೀತಿಯಲ್ಲಿ ನಡೆಸಿಕೊಳ್ಳುತ್ತಾರೆ. ಇಂತಹ ಪ್ರಸಂಗಗಳಲ್ಲಿ ಮಹಿಳೆಯರು ತಮ್ಮ ಮೇಲೆ ಆಗುತ್ತಿರುವಂತಹ ಹಿಂಸೆಯನ್ನು ಹೇಳಿಕೊಳ್ಳಲು ಹಿಂಜರಿಯುತ್ತಾರೆ. ಈ ಬಗೆಯ ಹಿಂಸೆಯು ಮಹಿಳೆಯರ ಮೇಲಿನ ದೈಹಿಕ ಹಾಗೂ ಮಾನಸಿಕ ಹಿಂಸೆಯಾಗಿರುತ್ತದೆ. ದೈಹಿಕ ಹಾಗೂ ಮಾನಸಿಕ ಹಿಂಸೆಗೆ ಸಂಬಂಧಿಸಿದಂತೆ ಶಂಕರ ಖಂಡೇರಿಯವರು ತಮ್ಮ "ನೀವು ಮತ್ತು ಕಾನೂನು : ವಿವಾಹ ವಿಚ್ಛೇದನ" ಎಂಬ ಗ್ರಂಥದಲ್ಲಿ ಒಂದು ಉದಾಹರಣೆಯನ್ನು ಈ ರೀತಿ ನೀಡುತ್ತಾರೆ. ಹುಡುಗಿಯು ನೋಡಲು ಸುಂದರವಾಗಿಲ್ಲ. ಶ್ರೀಮಂತರೂ ಅಲ್ಲ ಎಂದೂ ಗೊತ್ತಿದ್ದು, ಆ ಹುಡುಗಿಯ ತಂದೆ-ತಾಯಿ ಅಪಘಾತವೊಂದರಲ್ಲಿ ಮರಣ ಹೊಂದಿದ್ದರಿಂದ ಅವರಿಗೆ ಇವಳೊಬ್ಬಳೇ ಮಗಳಿದ್ದರಿಂದ ಪರಿಹಾರಧನವೆಂದು ಅವಳಿಗೆ ಹಣ ದೊರೆಯಿತು. ಈ ಹಣದ ಆಸೆಗಾಗಿ ಅವರದೇ ಜಾತಿಯ ಕಾಲೇಜು ಪ್ರಾಧ್ಯಾಪಕರೊಬ್ಬರು ಅವಳನ್ನು ವಿವಾಹವಾಗಲು ಇಷ್ಟಪಟ್ಟರು. ವರದಕ್ಷಿಣೆ, ವರೋಪಚಾರ ಯಾವುದು ಬೇಡ ಎಂದು ಹೇಳಿದರು. ಆ ಹುಡುಗಿಗೆ ಮೆಚ್ಚಿ ಮದುವೆಯಾಗುತ್ತೇನೆ ಎಂದು ಯಾರು ಹೇಳಿರಲಿಲ್ಲ. ಅಂತಹ ಸಂದರ್ಭದಲ್ಲಿ ಹೆಚ್ಚು ಕಲಿತಿರುವ ಮತ್ತು ಉದ್ಯೋಗದಲ್ಲಿರುವವರು ಬಾಳು ಕೊಡುತ್ತಾರೆ ಎಂದು ತಿಳಿದ ಆ ಹುಡುಗಿ ಮನಸಾರೆ ಒಪ್ಪಿ ಮದುವೆಯಾದಳು. ಮದುವೆಯಾಗಿ ಸ್ವಲ್ಪ ದಿವಸ ಉತ್ತಮವಾಗಿ ನೋಡಿಕೊಂಡ. ಅವನು ಅವಳಲ್ಲಿರುವ ಎಲ್ಲ ಹಣವನ್ನು ಖರ್ಚು ಮಾಡಿದ ನಂತರ ನಿಧಾನವಾಗಿ ಅವಳು ಮಾಡಿದ ಎಲ್ಲ ಕೆಲಸದಲ್ಲಿಯೂ ತಪ್ಪು ಕಂಡು ಹಿಡಿಯಲು ಆರಂಭಿಸಿದನು. ಅವನು ಮಾತ್ರ ಹೊಡೆಯುವುದಲ್ಲದೆ, ಆತನ ಮನೆಯ ಇತರೆ ಸದಸ್ಯರಿಂದಲೂ ಹೊಡೆಸುವುದು, ಕೆಟ್ಟ ಕೆಟ್ಟ ಶಬ್ದಗಳಿಂದ ಬೈಯುವುದು, ತಿಂಡಿ ಊಟದಲ್ಲಿ ತಾರತಮ್ಯ, ಎಲ್ಲರೂ ಮನೆಯಿಂದ ಹೊರ ಹೋಗುವಾಗ ಅವಳನ್ನು ಒಳಹಾಕಿ ಬೀಗಹಾಕಿ ಹೋಗುವುದು, ಇತ್ಯಾದಿ ಸಹಿಸಲು ಸಾಧ್ಯವಾಗದೇ ಇರುವಂತಹ ದೈಹಿಕ ಹಾಗೂ ಮಾನಸಿಕ ಹಿಂಸೆಯನ್ನು ನೀಡಿರುವನು.

ಗಂಡಂದಿರು ಹೆಂಡತಿಯರಿಗೆ ಕೊಡುವ ಕಿರುಕುಳದ ಸ್ವರೂಪವು ಹೀಗೆ ಇರುತ್ತದೆ ಎಂದು ನಿಖರವಾಗಿ ಹೇಳಲಾಗದು. ಕೆಲವು ಹೆಂಡತಿಯರು ದೈಹಿಕ ಹಿಂಸೆಯನ್ನು ಅನುಭವಿಸಿದರೆ, ಇನ್ನೂ ಕೆಲವರು ಮಾನಸಿಕ ಹಿಂಸೆಯನ್ನು ಅನುಭವಿಸುತ್ತಾರೆ. ಕೆಲವರು ದೈಹಿಕ ಹಾಗೂ ಮಾನಸಿಕ ಎರಡು ಬಗೆಯ ಹಿಂಸೆಗೂ ಒಳಗಾಗಿರುತ್ತಾರೆ. ದೈಹಿಕ ಹಿಂಸೆಯಾದರೆ ಚಿಕಿತ್ಸೆ ದೊರೆಯಬಹುದು. ಆದರೆ ಮಾನಸಿಕ ಹಿಂಸೆಗೆ ಚಿಕಿತ್ಸೆಗೆ ದೊರೆಯುವುದು ಕಷ್ಟ, ಏಕೆಂದರೆ ಇವು ತೆರೆಮರೆಯಿಂದ ನಡೆಯುವಂಥವಾಗಿರುತ್ತದೆ. ಈ ಹಿಂಸೆಯನ್ನು ಮಹಿಳೆ ಅನಾದಿಕಾಲದಿಂದಲೂ ಅನುಭವಿಸುತ್ತಲೇ ಬಂದಿದ್ದಾಳೆ. ಈ ಹಿಂಸೆಗಳಿಂದ ಮುಕ್ತಿ ಹೊಂದುವಂಥ ಮನೋಭಾವನೆಯೂ ಇಂದು ಮಹಿಳೆಯರಲ್ಲಿ ಕಾಣಬಹುದಾಗಿದೆ. ಹಾಗಾಗಿ ಈ ಹಿಂಸೆಗಳಿಂದ ಹೊರಬರುವುದಕ್ಕಾಗಿ ನ್ಯಾಯಾಲಯದ ಮೊರೆ ಹೋಗುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಲಿದೆ.

• **ವರದಕ್ಷಿಣೆ ಕಿರುಕುಳ**

"ವಿವಾಹದ ಸಮಯದಲ್ಲಿ ಮಗಳ ಸ್ವಂತ ಉಪಯೋಗಕ್ಕಾಗಿ ಆಕೆಯ ತಂದೆ-ತಾಯಿಗಳು ನೀಡುತ್ತಿದ್ದ 'ಸ್ತ್ರೀಧನ' ಅಥವಾ ವರನ ಕುಟುಂಬದವರು ಮಧುವಿನ ಕುಟುಂಬದವರಿಗೆ ಪರಿಹಾರ ರೂಪವಾಗಿ ನೀಡುತ್ತಿದ್ದ 'ವಧುದಕ್ಷಿಣೆ' ಈ ಎರಡು ಪದ್ಧತಿಗಳು ಕ್ರಮೇಣ ಮಾಯವಾಗಿ ಇಂದು ವರದಕ್ಷಿಣೆ ಎಂಬ ದುಷ್ಟ ಪದ್ಧತಿ ಎಡೆಯೆತ್ತಿ ನಿಂತಿದೆ. ಮದುವೆಯನ್ನು ಮಾರುಕಟ್ಟೆಯನ್ನಾಗಿ ಪರಿವರ್ತಿಸುವ ವರದಕ್ಷಿಣೆಯು ವಿವಾಹ ಪೂರ್ವದಲ್ಲಿ, ವಿವಾಹ ಸಮಯದಲ್ಲಿ ಮತ್ತು ವಿವಾಹ ನಂತರವೂ ಮಧುವಿನ ಕುಟುಂಬದವರು ವರನಿಗೆ ನೀಡುವಂಥ ನಗದು ಮತ್ತು ವಸ್ತು ರೂಪದ ಕಾಣಿಕೆಯಾಗಿದೆ. "ಆತ ಪುರುಷ, ಏನೂ ಬೇಕಾದರೂ ಬೇಡ ಬಹುದು. ತಮ್ಮ ಮಗಳನ್ನು ಮದುವೆಯಾದರೆ ಸಾಕು" ಎನ್ನುವ ಸ್ಥಿತಿಯಲ್ಲಿರುವ ಹೆಣ್ಣಿನ ಪೋಷಕರು ಆತ ಅಥವಾ ಆತನ ಕುಟುಂಬದವರು ಬೇಡಿದ ಸಮಸ್ತ ಬೇಡಿಕೆಗಳನ್ನೂ ಈಡೇರಿಸಲು ಸಿದ್ಧರಿರುತ್ತಾರೆ. ಆತ್ಮಾಭಿಮಾನವಿಲ್ಲದೆ ಮದುವೆ ಎಂಬ ವ್ಯಾಪಾರದಲ್ಲಿ ತನ್ನತನವನ್ನು ಕಳೆದುಕೊಂಡಿರುವ ಈ ಪುರುಷನನ್ನು ಧಿಕ್ಕರಿಸುವ ಬದಲು ಗೌರವಿಸಲಾಗುತ್ತದೆ. ವರದಕ್ಷಿಣೆ ವಿವಾಹದ ಸಮಯದಲ್ಲಿ ಮಾತ್ರ ಬೇಡುವ ಅಥವಾ ಕೊಡುವ ಕಾಣಿಕೆಯಲ್ಲಿ ವಿವಾಹ ನಂತರವೂ ವರದಕ್ಷಿಣೆಯ ಬೇಡಿಕೆಗಳು ಮುಂದುವರೆಯುತ್ತವೆ. ವರದಕ್ಷಿಣೆಯ ರೂಪದಲ್ಲಿ ನಗದು ಹಣ, ಒಡವೆ, ವಸ್ತ್ರ, ವಾಹನ, ಮನೆ, ವಿದೇಶ ಪ್ರಯಾಣ ಅಥವಾ ಅಧ್ಯಯನ, ಗೃಹಲಂಕಾರ ಸಾಧನಗಳು. ಹೀಗೆ ಏನನ್ನು ಬೇಕಾದರೂ ಅಳಿಯನಾದವನು ಅಥವಾ ಆಗುವವನು ಕೇಳಬಹುದು" (ಇಂದಿರಾ ಆರ್., ೨೦೦೨, ಪು. ೩೩).

ತಾವು ಬೇಡಿದ ಹಣ ಅಥವಾ ವಸ್ತುಗಳನ್ನು ತರಬೇಕೆಂಬ ಒತ್ತಾಯದ ಜೊತೆ ಜೊತೆಗೆ ಓರ್ವ ಸ್ತ್ರೀಯನ್ನು ದೈಹಿಕ ಹಾಗೂ ಮಾನಸಿಕ ಹಿಂಸೆಗೆ ಗುರಿಪಡಿಸಲಾಗುತ್ತದೆ. ಗಂಡಂದಿರು ಹೆಂಡತಿ ತನ್ನ ತೌರಿನಿಂದ ಎಲ್ಲವನ್ನೂ ಹೊತ್ತುಕೊಂಡು ಬರಬೇಕೆಂದು ನಿರೀಕ್ಷಿಸುತ್ತಾರೆ. ಅದಕ್ಕಾಗಿ ಪದೇ ಪದೇ ಹೆಂಡತಿಯರಿಗೆ 'ನಿನ್ನ ತವರು ಮನೆಗೆ ಹೋಗಿ ಹಣ ತೆಗೆದುಕೊಂಡು ಬಾ' ಎಂದು ಹೇಳುವುದುಂಟು. ಒಂದು ವೇಳೆ ಅವಳು ಒಪ್ಪದೇ ಇದ್ದರೆ ಹೊಡೆಯುತ್ತಾರೆ. ಕೆಲವರು ಈ ಹಣ ತರಲೆಂದು ಪತ್ನಿಯನ್ನು ತವರಿಗೆ ತಂದು ಬಿಡುತ್ತಾರೆ. ಅವಳೇನಾದರೂ ಹಣ ತೆಗೆದುಕೊಂಡು ಹೋಗದೇ ಹಾಗೆ ಹೋಗಿದ್ದೆಯಾದರೆ ಅವಳನ್ನು ತಮ್ಮ ಮನೆಯ ಒಳಗೆ ಕರೆದುಕೊಳ್ಳದೇ ಹೊರಗೆ ನಿಲ್ಲಿಸುತ್ತಾರೆ ಅಥವಾ ಊಟ ಕೊಡದೇ ಉಪವಾಸವಿರುವಂತೆ ಮಾಡುತ್ತಾರೆ. ಇಲ್ಲವಾದರೆ ಅವಳನ್ನು ಅವರ ತವರಿನವರ ಜೊತೆ ಮಾತಾಡದಂತೆ ಕಟ್ಟಪ್ಪಣೆ ಮಾಡುವುದುಂಟು. ಒಂದರ್ಥದಲ್ಲಿ ಈ ಹಿಂಸೆಗಳು ಕಡಿಮೆ ದರ್ಜೆಯ ಹಿಂಸೆಗಳೆಂದೇ ಹೇಳ ಬಹುದು. ಏಕೆಂದರೆ ಎಣ್ಣೆ ಸುರಿದು ಬೆಂಕಿ ಹಚ್ಚುವುದು, ಗ್ಯಾಸ್ ಬಿಟ್ಟು ಬೆಂಕಿ ಹಚ್ಚುವುದು, ಮಲಗಿದ್ದಾಗ ಉಸಿರಾಡದಂತೆ ದಿಂಬನ್ನು ಇಟ್ಟು ಸಾಹಿಸುವುದು, ನೇಣು ಹಾಕುವುದು ಈ ತರಹದ ಕ್ರೂರ ಹಿಂಸೆಗಳಿಗೆ ಮಹಿಳೆ ಪ್ರತಿನಿತ್ಯ ಬಲಿಯಾಗುತ್ತಲೇ ಇದ್ದಾಳೆಂಬುದು ದಿನನಿತ್ಯ ಪತ್ರಿಕೆಯಲ್ಲಿ ನೋಡುತ್ತೇವೆ. ವರದಕ್ಷಿಣೆ ಸಂಬಂಧಿ ಕ್ರೌರ್ಯ ಯಾವ ಪ್ರಮಾಣದಲ್ಲಿದೆಂಬುದನ್ನು ತಿಳಿಯಲು ಇವು ಸಾಕ್ಷಿಯಾಗಿವೆ. ವರದಕ್ಷಿಣೆ ಕೊಡುವುದಿರಬಹುದು ಅಥವಾ ಪಡೆಯುವುದಿರಬಹುದು, ಎರಡೂ ಕಾನೂನಿನನ್ವಯ ಅಪರಾಧವೆಂದು

ತಿಳಿದಿದ್ದರೂ ವರದಕ್ಷಿಣೆ ಕೊಡುವ ತೆಗೆದುಕೊಳ್ಳುವ ವ್ಯವಹಾರ ಮಾತ್ರ ದಿನೇ ದಿನೇ ಹೆಚ್ಚಾಗುತ್ತಲಿದೆ. ಇದಕ್ಕಾಗಿ ಮಹಿಳೆಯರ ಮೇಲೆ ನಡೆಯುವ ಹಿಂಸೆ ಆಕೆಯ ದೇಹ ಮತ್ತು ಮನಸ್ಸನ್ನು ಘಾಸಿಗೊಳಿಸುತ್ತದೆ. ಈ ಕುರಿತಂತೆ ಮಹಿಳೆಯರು ವಿಚ್ಛೇದನೆಯನ್ನು ಪಡೆಯಬಹುದಾಗಿದೆ.

• ಅನುಮಾನಿಸುವ ಪ್ರವೃತ್ತಿ

ಹೆಂಡತಿಯರು ತಮ್ಮ ಗಂಡನನ್ನು ಬಿಟ್ಟು ಇತರೆ ಪುರುಷನನ್ನು ಮಾತನಾಡಿಸುವುದಿರಬಹುದು ಅಥವಾ ನೋಡುವುದಿರಬಹುದು ಅಥವಾ ಆ ಪುರುಷರೇ ಅವರನ್ನು ಮಾತನಾಡಿಸಿದರೇ ಅವಳು ಮಾತ ನಾಡುವುದೇ ಅಪರಾಧವೆಂದು ಭಾವಿಸುವ ಗಂಡಂದಿರು ತಮ್ಮ ಹೆಂಡತಿಯನ್ನು ಸದಾ ಅನುಮಾನ ದಿಂದಲೇ ನೋಡುತ್ತಾರೆ.

ಹೆಂಡತಿಯರು ಮನೆಯಲ್ಲಿನ ಕೆಲಸದ ನಿಮಿತ್ತ ಹೊರಗಿದ್ದಂತಹ ಸಂದರ್ಭದಲ್ಲಿ ಯಾರಾದರೂ ಪುರುಷರು ಹೋದರೆ ಅಥವಾ ಅಪರಿಚಿತ ಪುರುಷರು ಅವರಿಗೆ ಏನಾದರೂ ಕೇಳಿದರೆ 'ಅವನು ನೀನು ಹೊರಗೆ ಇದ್ದಾಗಲೇ ಯಾಕೆ ಹೋದ? ಅವನು ನಿನ್ನ ಯಾಕ ಮಾತಾಡ್ಸಿದ? ನಿನಗೂ ಅವನಿಗೂ ಏನು ಸಂಬಂಧ' ಅಂತ ಕೇಳುವುದುಂಟು. ಯಾವುದಾದರೂ ಕೆಲಸದ ನಿಮಿತ್ತ ಹೆಂಡತಿ ಹೊರಗೆ ಹೋದಂಥ ಸಂದರ್ಭದಲ್ಲಿ ಯಾರಾದ್ರು ಪರಿಚಯಸ್ಥ ಗಂಡಸರು ಸಿಕ್ಕು ಮಾತಾಡಿಸಿದ್ದರಿಂದ ಮನೆಗೆ ಬರೋದು, ಲೇಟಾದ್ರೆ 'ಯಾಕೆ ಮನೆಗೆ ಲೇಟಾಗಿ ಬಂದೆ. ಯಾರನ್ನ ಭೇಟ್ಟಿಯಾಗೋಕೆ ಹೋಗಿದ್ದೆ' ಎಂಬ ಪ್ರಶ್ನೆಗಳ ಸುರಿಮಳೆಯಾಗುತ್ತದೆ. 'ನೀನು ಒಬ್ಬಳೆ ಎಲ್ಲಿಗೂ ಹೊರಗೆ ಹೊಗ್ಬೇಡ. ನೀನು ಒಬ್ಬಳೆ ಹೋದ್ರೆ ಸರಿಯಾಗಿ ಬರುತ್ತಿಯಂಥಾ ಏನ್ ಗ್ಯಾರಂಟಿ?' ಅನ್ನೋದು. ಚೆನ್ನಾಗಿ ಸೀರೆ ಉಟ್ಕೊಂಡು ಹೂ ಮುಡಿದುಕೊಂಡಿದ್ರೆ 'ಯಾಕೆ ಹೀಗೆ ರೆಡಿಯಾಗಿದ್ದೀಯಾ? ಯಾರಿಗೋಸ್ಕರ ಕಾಯ್ತಿದಿಯ' ಎಂದು ಹೀಗೆ ಒಂದಲ್ಲ ಒಂದು ಕಾರಣಕ್ಕೆ ಹೆಂಡತಿಯರನ್ನು ಗಂಡಂದಿರು ಅನುಮಾನಿಸುವುದು ಕಂಡು ಬರುತ್ತದೆ.

ಇನ್ನೂ ಕೆಲವು ಗಂಡಂದಿರು ತಮ್ಮ ಹೆಂಡತಿಯರು ಮದುವೆಗೆ ಮುಂಚೆ ತೆಗೆಸಿಕೊಂಡಿದ್ದ ಫೋಟೋದಲ್ಲಿ ಯಾರಾದ್ರು ಗಂಡಸರಿದ್ರೆ, ಆ ಫೋಟೋ ನೋಡಿ "ಈ ಫೋಟೋದಲ್ಲಿ ಇವನ್ಯಾಕ ಇದ್ದಾನೆ? ಇವನಿಗೂ ನಿನಗೂ ಏನ್ ಸಂಬಂಧ? ನೀನು ಸರಿಯಾಗಿದ್ದೀಯಾ ಇಲ್ಲ"? ನೀನು ಸರಿಯಾಗಿದ್ದೀನಿ ಅಂತಾ ಆಣೆ ಪ್ರಮಾಣಗಳನ್ನು ಮಾಡಿಸುವುದು. ಆಣೆ, ಪ್ರಮಾಣ ಮಾಡಿದ್ರು ಅವನು ಅನುಮಾನ ಪ್ರವೃತ್ತಿಯೇನು ಕಡಿಮೆಯಾಗೋದಿಲ್ಲ. ಹೀಗೆ ಒಂದಲ್ಲ ಒಂದು ಕಾರಣಕ್ಕೆ ಹೆಂಡತಿಯನ್ನು ಅನುಮಾನದಿಂದ ನೋಡುವ ಗಂಡಂದಿರ ಈ ಪ್ರವೃತ್ತಿಯಿಂದ ಹಿಂಸೆಗೊಳಗಾಗುವ ಮಹಿಳೆಯರು ಅಂಥವರಿಂದ ಹೊರಬರಲು ಬಯಸುವುದು ಸಹಜವಾಗಿದೆ.

• ಹೊಂದಾಣಿಕೆಯ ಸಮಸ್ಯೆ

ಹೊಂದಾಣಿಕೆ ಎನ್ನುವುದು ಪ್ರತಿಯೊಬ್ಬರ ಜೀವನದಲ್ಲಿ ಅವಶ್ಯಕವಾಗಿರುವಂತಹ ಸಂಗತಿಯಾಗಿದೆ. ಈ ಹೊಂದಾಣಿಕೆಯು ಗಂಡ-ಹೆಂಡತಿ ಇಬ್ಬರಲ್ಲಿಯೂ ಇರಬೇಕು. ಇವರಿಬ್ಬರಲ್ಲಿ ಯಾರಾದರೂ ಒಬ್ಬರಿಂದ

ಮಾತ್ರ ಹೊಂದಾಣಿಕೆಯನ್ನು ನಿರೀಕ್ಷಿಸುವುದು ಸಮಸ್ಯೆಗಳಿಗೆ ದಾರಿ ಮಾಡಿಕೊಡುತ್ತದೆ. ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಪುರುಷಪ್ರಧಾನ ವ್ಯವಸ್ಥೆಯೂ ಹೊಂದಾಣಿಕೆಯನ್ನು ಪತ್ನಿಯಿಂದ ಮಾತ್ರ ನಿರೀಕ್ಷಿಸುತ್ತದೆ. ಹೀಗಾಗಿ ಸಮಸ್ಯೆಗಳು ಉದ್ಭವವಾಗುತ್ತವೆ.

ಅನಾದಿಕಾಲದಿಂದಲೂ ಪುರುಷರು ಮಹಿಳೆಯರ ಮೇಲೆ ಅಧಿಕಾರ ಚಲಾಯಿಸುತ್ತಲೇ ಬರುತ್ತಿರುವುದು ಎಲ್ಲರಿಗೂ ತಿಳಿದಂಥ ವಿಚಾರ. ಹೆಂಡತಿಯಾದವಳು ಸದಾ ಗಂಡನ ದಾಸಿಯಂತೆ ಕಾರ್ಯನಿರ್ವಹಿಸಬೇಕು. ಅವರು ಕೊಡೆಂದರೆ ಕೊಡಬೇಕು, ನಿಲ್ಲೆಂದರೇ ನಿಲ್ಲಬೇಕು. ಅವರು ಕೊಡುವ ಹಿಂಸೆಗಳನ್ನೆಲ್ಲ ಮೌನವಾಗಿ ಸಹಿಸಿಕೊಂಡು ಗಂಡನೇ ದೇವರೆಂದು ಪೂಜಿಸುವ ಮೂಲಕ ಹೊಂದಾಣಿಕೆಯ ಜೀವನ ನಡೆಸುವ ಪತ್ನಿಯು ಉತ್ತಮ ಪತ್ನಿಯಾಗಿ ಸಮಾಜದಲ್ಲಿ ಗೌರವ ಮನ್ನಣೆ ಪಡೆಯುತ್ತಾಳೆ ಎನ್ನುವ ಭಾವನೆ ನಮ್ಮ ಸಮಾಜ ದಲ್ಲಿದೆ. ಆದರೆ ಇಂದು ಮಹಿಳೆಯರಿಗೆ ಇಂತಹ ಸ್ಥಿತಿಯ ಬಗ್ಗೆ ಜಾಗೃತಿ ಮೂಡುತ್ತಿದೆ. ಹಾಗಾಗಿ ಇಂತಹ ಸ್ಥಿತಿಯಿಂದ ಬಿಡುಗಡೆ ಹೊಂದುವಂಥ ಮನೋಭಾವ ಅವರಲ್ಲಿ ಹೆಚ್ಚಾಗುತ್ತಿದೆ.

ಮನೆಯಲ್ಲಿ ಅಡುಗೆ ಮಾಡುವುದು, ಪಾತ್ರೆ ತೊಳೆಯುವುದು, ಬಟ್ಟೆ ತೊಳೆಯುವುದು. ಮಕ್ಕಳ ಪಾಲನೆ ಮಾಡುವುದು ಇತ್ಯಾದಿ ಕೆಲಸಗಳೆಲ್ಲ ಮಹಿಳೆಯರಿಗೆ ಮೀಸಲಾದ ಕೆಲಸಗಳೆಂದು ಸಾರುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ, ಸಂಕಷ್ಟದ ಸ್ಥಿತಿಯನ್ನು ಮಹಿಳೆಯರು ಎದುರಿಸುತ್ತಿರುವರು. ಮನೆಯ ಯಾವ ಕೆಲಸದಲ್ಲಿಯೂ ಸಹಾಯ ಮಾಡದ ಪತಿಯು ಈ ಕೆಲಸಗಳಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಸಹಿಸುವುದಿಲ್ಲ. ಬದಲಿಗೆ ಪತ್ನಿಯನ್ನೇ ಹಿಂಸಿಸುತ್ತಾನೆ. ಉದ್ಯೋಗದಲ್ಲಿ ಇರುವಂಥ ಪತ್ನಿಯಾಗಿದ್ದರೆ ಇಬ್ಬಗೆಯ ಹೊಣೆ ಗಾರಿಕೆಯು ಅವಳ ಪಾಲಾಗಿರುತ್ತದೆ. ಹಣ ಕೊಟ್ಟು ಕೆಲಸದವರನ್ನು ಇಟ್ಟುಕೊಳ್ಳಬಹುದಾದರೂ, ತಮ್ಮ ಕಾರ್ಯಗಳನ್ನು ಪತ್ನಿಯಿಂದಲೇ ಪೂರೈಸಿಕೊಳ್ಳಬಯಸುವ ಪತಿಮಹಾಶಯರಿದ್ದಾರೆ. ಇದರಿಂದಾಗಿ ಅವಳಿಗಾಗುವ ಒತ್ತಡವನ್ನು ಗಮನಿಸುವುದಿಲ್ಲ. ಮನೆಯಲ್ಲಿಯೇ ಇರುವ ಪತ್ನಿ ಇರಬಹುದು ಅಥವಾ ಉದ್ಯೋಗ ಮಾಡುತ್ತಿರುವ ಪತ್ನಿ ಇರಬಹುದು, ಅವರು ನಿರ್ವಹಿಸುವ ಕೆಲಸಗಳಿಂದ ಅವಳಿಗಾಗುತ್ತಿರುವ ಒತ್ತಡ, ನೋವು ಇವುಗಳಾವುದನ್ನು ಗಮನಿಸದ ಪತಿಯು ಅವಳಿಂದ ತನಗೆ ಬೇಕಾಗಿರುವಂತಹ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವಲ್ಲಿ ಮಾತ್ರ ಆಸಕ್ತಿ ಹೊಂದಿರುತ್ತಾನೆ. ಹಾಗೆ ಬಲವಂತವಾಗಿಯಾದರೂ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾರೆ

ಪತಿ-ಪತ್ನಿ ಇಬ್ಬರೂ ಉದ್ಯೋಗದಲ್ಲಿ ಇದ್ದಂತಹ ಸಂದರ್ಭದಲ್ಲಿ ಇವರುಗಳ ನಡುವೆ ಹೆಚ್ಚಾಗಿ ಪ್ರತಿಷ್ಠೆ, ಮೇಲು-ಕೀಳು ಇವುಗಳಿಗೆ ಸಂಬಂಧಿಸಿದಂತೆ ಘರ್ಷಣೆ ಕಂಡು ಬರುತ್ತವೆ. ನಮ್ಮ ಸಮಾಜದಲ್ಲಿ ಪುರುಷರು ಯಾವಾಗಲೂ ಪ್ರಥಮ ಸ್ಥಾನದಲ್ಲಿ ಗುರುತಿಸಿಕೊಳ್ಳಲು ಬಯಸುತ್ತಾನೆ. ಇದರಲ್ಲಿ ಅಲ್ಪ ಪ್ರಮಾಣದ ವ್ಯತ್ಯಾಸ ಕಂಡುಬಂದರೂ ಅದನ್ನು ಅವರು ಸಹಿಸುವುದಿಲ್ಲ. ತನಗಿಂತ ಹೆಂಡತಿಯಾದವಳು ಕೆಳಸ್ಥಾನದಲ್ಲಿ ಇರಬೇಕು ಎನ್ನುವುದು ಅವರಲ್ಲಿ ಮನೆಮಾಡಿ ಬಿಟ್ಟಿರುತ್ತದೆ. ಹೆಂಡತಿಯ ಸಂಪಾದನೆಯೂ ತಾನು ಸಂಪಾದನೆ ಮಾಡುವುದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಇದ್ದರೆ ಅದನ್ನು ಸಹಿಸುವುದಿಲ್ಲ. ಹಾಗೆ

ಉದ್ಯೋಗದಲ್ಲಿಯೂ ಅವರಿಗಿಂತ ಮುಂಚಿತವಾಗಿ ಬಡ್ತಿ ಹೊಂದಿದರೂ ಸಹಿಸುವುದಿಲ್ಲ. ಒಂದು ವೇಳೆ ಇದರಲ್ಲಿ ವ್ಯತ್ಯಾಸ ಕಂಡು ಬಂದರೆ ಅದನ್ನು ಅವರು ಸಹಿಸದೇ ಪ್ರತಿಯೊಂದು ವಿಷಯಕ್ಕೂ ಜಗಳ ಮಾಡುವ ಪ್ರವೃತ್ತಿ ಬೆಳೆಸಿಕೊಳ್ಳುತ್ತಾರೆ.

ಹೀಗೆ ಎಲ್ಲಾ ಸಂದರ್ಭಗಳಲ್ಲಿ ಹೊಂದಿಕೊಂಡು ನಡೆಯುವಂಥ ಸ್ಥಿತಿಯೂ ಅವಳ ಪಾಲಿಗೆ ದಿನನಿತ್ಯದ ಗೋಳಾಗಿರುತ್ತದೆ. ಹಾಗಾಗಿ ಇಂತಹ ಸ್ಥಿತಿಯಿಂದ ಮಹಿಳೆಯರು ಹೊರಬರಲು ಪ್ರಯತ್ನಿಸ ಬೇಕಾಗಿರುವುದು ಅತ್ಯಗತ್ಯ.

- **ವ್ಯಕ್ತಿತ್ವದ ಬಗ್ಗೆ ಆಸಕ್ತಿ**

ಇತ್ತೀಚಿನ ಸಂದರ್ಭದಲ್ಲಿ ವ್ಯಕ್ತಿತ್ವದ ಬೆಳವಣಿಗೆ ಕುರಿತಂತೆ ಹಾಗೆ ತಮ್ಮ ವ್ಯಕ್ತಿತ್ವಕ್ಕೆ ದಕ್ಕೆಯಾಗು ವಂತಹ ಸಂದರ್ಭ ಕುರಿತಂತೆಯೂ ಮಹಿಳೆಯರು ವಿಚ್ಛೇದನ ಪ್ರಕ್ರಿಯೆಯಲ್ಲಿ ಒಳಗಾಗಿರುವುದು ಕಂಡು ಬರುತ್ತದೆ.

ಪುರುಷಪ್ರಧಾನ ವ್ಯವಸ್ಥೆಯಲ್ಲಿ ರೂಪುಗೊಂಡ ವಿವಾಹ ಸಂಸ್ಥೆಯೂ ಮಹಿಳೆಯರ ವ್ಯಕ್ತಿತ್ವವನ್ನು ಗಂಡನನ್ನು ಹೇಗೆ ನೋಡಿಕೊಳ್ಳಬೇಕು. ಮಕ್ಕಳನ್ನು ಹೇಗೆ ನೋಡಿಕೊಳ್ಳಬೇಕು. ಒಟ್ಟಾರೆ ಕುಟುಂಬದ ಜವಾಬ್ದಾರಿಯನ್ನು ಹೇಗೆ ನೋಡಿಕೊಳ್ಳಬೇಕೆಂಬುದಕ್ಕೆ ಸೀಮಿತವಾಗಿಸುತ್ತಲ್ಲದೆ, ಅದನ್ನೇ ಮುಖ್ಯವಾಗಿಸುತ್ತದೆ. ಒಟ್ಟಿನಲ್ಲಿ ಅವರ ವ್ಯಕ್ತಿತ್ವವನ್ನು ಕುಟುಂಬಕ್ಕೆ ಸೀಮಿತಗೊಳಿಸುವಂಥ ಸ್ಥಿತಿ ಕಂಡು ಬರುತ್ತದೆ. ಇಂತಹ ಸ್ಥಿತಿಯು ಮಹಿಳೆಯರನ್ನು ಕುಬ್ಜವಾಗಿಸುತ್ತದೆ. ಅವರ ವ್ಯಕ್ತಿತ್ವದ ಬಗ್ಗೆ ಆಸಕ್ತಿ ತೋರದ ಗಂಡ ಈ ಕುರಿತಂತೆ ಹೆಂಡತಿಯ ಜೊತೆ ಕದನಕ್ಕಿಳಿಯುತ್ತಾನೆ. ಈ ಬಗೆಯಲ್ಲಿನ ಜೀವನ ಅವಳಿಗೆ ಹಿಂಸಾತ್ಮಕ ವಾಗಿರುತ್ತದೆ. ಹಾಗಾಗಿ ವ್ಯಕ್ತಿತ್ವವನ್ನು ಮರೆಮಾಚಿಸುವಂಥ ವಾತಾವರಣದಲ್ಲಿ ಜೀವನ ನಡೆಸಲು ಇಷ್ಟಪಡದೇ ಅಂತಹ ಬಂಧನದಿಂದ ಹೊರಬರಲು ಬಯಸುವುದುಂಟು.

- **ಇತರೆ ಕಾರಣಗಳು**

ಕುಟುಂಬದವರೆಲ್ಲ ಸೇರಿ ಮಾಡುವಂಥ ವಿವಾಹವನ್ನು ಸಾಂಪ್ರದಾಯಿಕ ವಿವಾಹ ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಈ ರೀತಿಯ ವಿವಾಹಗಳಲ್ಲಿ ಹೆಚ್ಚಿನ ಸಂದರ್ಭದಲ್ಲಿ ಹುಡುಗ-ಹುಡುಗಿಯ ಒಪ್ಪಿಗೆಗಿಂತ ಕುಟುಂಬ ವರ್ಗದವರ ಒಪ್ಪಿಗೆ ಮುಖ್ಯವಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಹುಡುಗನ ಒಪ್ಪಿಗೆಯು ಮುಖ್ಯವಾಗಿ ಆತನ ಅಭಿಪ್ರಾಯವನ್ನು ಕೇಳುವುದು ಕಾಣಬಹುದಾದರೂ ಹುಡುಗಿಯರ ವಿಷಯದಲ್ಲಿ ಅವರ ಅಭಿಪ್ರಾಯವನ್ನು ಕೇಳದ ಸಂದರ್ಭಗಳೇ ಹೆಚ್ಚು. ಇಬ್ಬರಲ್ಲಿ ಯಾರೊಬ್ಬರಿಗೂ ಇಷ್ಟವಿಲ್ಲದಿದ್ದರೂ ವಿವಾಹ ಬಂಧನ ಬೇಡವಾಗುತ್ತದೆ. ಹುಡುಗಿಗೆ ಹುಡುಗ ಇಷ್ಟವಿಲ್ಲದಿದ್ದರೂ ಹೊಂದಿಕೊಳ್ಳುವಂತಹ ಸ್ಥಿತಿ ಕಂಡು ಬರುತ್ತದೆ. ಆದರೆ ಹುಡುಗರಿಗೆ ಇಷ್ಟವಿಲ್ಲದೆ ಬಲವಂತವಾಗಿ ವಿವಾಹ ಮಾಡಿಸಿದ್ದೆಯಾದರೆ ಹುಡುಗಿಯರಿಗೆ ಹಿಂಸಿಸಲು ಪ್ರಾರಂಭಿಸುತ್ತಾನೆ.

ನಮ್ಮಲ್ಲಿ ಅನೇಕ ವಿವಾಹಗಳು ಸೋದರ ಸಂಬಂಧಗಳಲ್ಲಿ ನಡೆಯುತ್ತವೆ. ಇಲ್ಲಿ ಹುಡುಗಿಯನ್ನು ಹುಡುಗಿಯ ತಾಯಿಯ ತಮ್ಮನಿಗೆ ವಿವಾಹ ಮಾಡಿಕೊಡಲಾಗುತ್ತವೆ. ಇಂತಹ ವಿವಾಹ ಬಲವಂತದಿಂದ ನಡೆದಿದ್ದೆಯಾದರೆ ಇವರುಗಳ ಮಧ್ಯೆ ಸಮಸ್ಯೆ ಕಂಡು ಬರುತ್ತದೆ. 'ಅವಳೇನು ಬೇರೆಯವಳಾ?, ನಿನ್ನ ಅಕ್ಕನ ಮಗಳು ಅವಳನ್ನು ಮದುವೆಯಾಗೊದ್ರಿಂದ ನಮಗೂ ಅನುಕೂಲ. ನಿಮ್ಮ ಅಕ್ಕನಿಗೂ ಅನುಕೂಲ' ಎನ್ನುವಂಥ ಮಾತುಗಳ ಮೂಲಕ ಬಲವಂತವಾಗಿ ಹುಡುಗನನ್ನು ಒಪ್ಪಿಸಿ ವಿವಾಹ ಮಾಡಿಸುತ್ತಾರೆ. ವಿವಾಹ ಮಾಡಿದರೆ ಮುಗಿಯಿತು. ಮುಂದಿನದು ಅವರಿಗೆ ಬಿಟ್ಟಿದ್ದು ಎನ್ನುವ ಮನೋಭಾವನೆಯೂ ಪೋಷಕರಲ್ಲಿ ಕಂಡು ಬರುತ್ತದೆ. ಹಾಗಾಗಿ ಬಲವಂತದಿಂದ ಮಾಡಿದ ವಿವಾಹದಲ್ಲಿ ಹುಡುಗಿಗಾಗುವ ಹಿಂಸೆಯ ಬಗೆಗೆ ಅವರು ಗಮನಹರಿಸುವುದಿಲ್ಲ. ಅಕ್ಕನ ಮಗಳು ಎನ್ನುವ ಕಾರಣಕ್ಕೆ ಗಂಡನಾದವನು ಹೆಂಡತಿಗೆ ದೈಹಿಕ ಹಿಂಸೆ ನೀಡದಿರಬಹುದು. ಆದರೆ ಮಾನಸಿಕ ಹಿಂಸೆ ಅವಳಿಗೆ ತಪ್ಪಿದ್ದಲ್ಲ.

ಇಷ್ಟಪಟ್ಟೇ ವಿವಾಹವಾದ ಹುಡುಗನಿಗೆ ಮುಂದೊಂದು ದಿನ ಆ ಹುಡುಗಿ ನನಗೆ ಸರಿಯಾದ ಜೋಡಿ ಅಲ್ಲ ಎನಿಸಬಹುದು ಅಥವಾ ಅವಳ ಜೊತೆಗಿನ ಸಂಸಾರ ಜೀವನ ಬೇಸರವೆನಿಸಬಹುದು. ಅವಳ ಬದಲು ಮತ್ತೊಂದು ಹುಡುಗಿ ಅವನಿಗೆ ಸರಿಯಾದ ಸಂಗಾತಿ ಎನಿಸಬಹುದು. ಇಂತಹ ಸಂದರ್ಭದಲ್ಲಿ ಬೇಸರವೇನಿಸಿದ ಪತ್ನಿಯನ್ನು ತಮ್ಮ ಜೀವನದಿಂದ ಹೊರ ಹಾಕುವುದಕ್ಕಾಗಿ ಹಿಂಸೆಗಳನ್ನು ಕೊಡಲು ಪ್ರಾರಂಭಿಸುವುದುಂಟು.

ಮೇಲಿನ ಎಲ್ಲಾ ಸಂದರ್ಭಗಳಲ್ಲಿ ವೈವಾಹಿಕ ಸಂಬಂಧದಲ್ಲಿ ಸಮಸ್ಯೆಗಳೊಳಗಾಗುವ ಮಹಿಳೆಯರು. ಅಂತಹ ಬಂಧನದಿಂದ ಹೊರ ಬರುವುದಕ್ಕಾಗಿ ವಿಚ್ಛೇದನೆ ಕಡೆಗೆ ಮುಖ ಮಾಡುತ್ತಾರೆ.

ಈ ಮೇಲಿನ ಕಾರಣಗಳಿಂದಾಗಿ ಮಹಿಳೆಯರು ವಿಚ್ಛೇದನೆ ಬಯಸುತ್ತಾರೆ. ಇವುಗಳ ಜೊತೆಗೆ 'ಹಿಂದೂ ವಿವಾಹ ಕಾಯ್ದೆ'ಯು ತಿಳಿಸುವಂಥ ಕಾರಣಗಳಿಗಾಗಿಯೂ ವಿವಾಹ ಬಂಧನದಿಂದ ಹೊರಬರ ಬಹುದಾಗಿದೆ. ಈ ಕಾಯ್ದೆ ತಿಳಿಸುವ ಕಾರಣಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಉಲ್ಲೇಖಗಳು**


೧. ಗೀತಾಕೃಷ್ಣಮೂರ್ತಿ, ೨೦೦೭, **ಮಹಿಳೆ ಸಮಾಜ, ಕಾನೂನು**, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

೨. ಶಂಕರ ಖಂಡೇರಿ, ೧೯೯೯, **ನೀವು ಮತ್ತು ಕಾನೂನು : ವಿವಾಹ ವಿಚ್ಛೇದನೆ**, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು.

೩. ಇಂದಿರಾ ಆರ್., ೨೦೦೨, **ಮಹಿಳಾ ಸಮಾಜ ಮತ್ತು ಸಂಸ್ಕೃತಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.


• • •

## ಅಧ್ಯಾಯ ೪

# ವಿಚ್ಛೇದನದ ಅಪೇಕ್ಷೆಯ ನೆಲೆಗಳು

ವಿವಾಹವು ಸ್ತ್ರೀ-ಪುರುಷರ ನಡುವೆ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಮಾನಸಿಕ ಅಸಮಾನತೆಗಳನ್ನು ಜಾರಿಗೊಳಿಸುವ ಸಂಸ್ಥೆ. ಇದು ಮಹಿಳೆಯ ಎಲ್ಲಾ ಸಮಸ್ಯೆ ನೆಲೆ ಆಗಿದೆ. ಬಹು ಶತಮಾನಗಳಿಂದ ಮಹಿಳೆಯರು ತಮ್ಮ ಆಸೆ-ಆಕಾಂಕ್ಷೆ, ಸಂತೋಷಗಳನ್ನು ಪಕ್ಕಕಿಟ್ಟು, ತನ್ನ ಗಂಡ (ಪುರುಷ)ನಿಗೆ ತಕ್ಕಂತೆ ಮತ್ತು ಅವನ ಸುಖ, ಸಂತೋಷ ಹಿತಾಸಕ್ತಿಗಾಗಿಯೇ ತಮ್ಮ ಬದುಕನ್ನು ಸಾಗಿಸಬೇಕೆಂಬ ಪುರುಷನಿಷ್ಠ ಮೌಲ್ಯಗಳ ಅನುಗುಣವಾಗಿ ನಡೆಯುವ ಅನಿವಾರ್ಯತೆಯನ್ನು ಸೃಷ್ಟಿಸಲಾಯಿತು. ಅಷ್ಟೇ ಅಲ್ಲ, ಆಕೆ ತನ್ನಲ್ಲಿರುವ ನೈಪುಣ್ಯತೆಯನ್ನು ಸಹ ಪುರುಷ ಮನೋರಂಜನೆ ಒದಗಿಸುವ; ಅವನಿಗೆ ಗೌರವ ತಂದು ಕೊಡುವ ಚಟುವಟಿಕೆಗಳಾದ ಅಡುಗೆ, ರಂಗೋಲಿ, ಕಸೂತಿ, ಹಾಡು-ನೃತ್ಯ ಇತ್ಯಾದಿಗಳಿಗೆ ಚಟುವಟಿಕೆಗಳು ಸೀಮಿತಗೊಳಿಸಲಾಯಿತು. ಆದರೆ ಆಧುನಿಕತೆಯಿಂದಾಗಿ ಹೆಂಗಸು ತನ್ನ ಬದುಕನ್ನು ಗ್ರಹಿಸುತ್ತಿದ್ದಾಳೆ. ಈ ಹಿನ್ನೆಲೆಯಿಂದ ವಿವಾಹ ಸಂಸ್ಥೆಯಲ್ಲಿರುವ ಅಸಮಾನತೆ ಮತ್ತು ಶೋಷಣೆಗಳನ್ನು ಗುರುತಿಸುತ್ತಿದ್ದಾಳೆ. ಪ್ರಪಂಚವೇ ತನ್ನದೆಂದು ಸಾರುತ್ತಿರುವ ಪುರುಷರು, ತನಗೆ ಅಗತ್ಯವಾದುದನ್ನು ಮಾಡಲು ಒತ್ತಾಯಿಸುವ ಅವನ ಮನೋಭಾವವನ್ನು ವಿರೋಧಿಸುತ್ತಿದ್ದಾಳೆ. ವಿವಾಹದಂತಹ ಸಂಸ್ಥೆ ಅವಳ ಸಾಮಾಜಿಕ ವ್ಯಕ್ತಿತ್ವ ರೂಪಿಕೆಗೆ ಅಡ್ಡಿಯನ್ನುಂಟುಮಾಡುತ್ತದೆ ಎಂದು ತಿಳಿದು ಅವಳು ಅದನ್ನು ನಿರಾಕರಿಸಿ ಹೊರಬರುತ್ತಿದ್ದಾಳೆ.

ವಿಚ್ಛೇದನೆ ಎಂಬ ಪ್ರಕ್ರಿಯೆಯು ವಿವಾಹಿತ ಪತಿ/ಪತ್ನಿಯರನ್ನು ಬೇರ್ಪಡಿಸುತ್ತದೆ. ಇತ್ತೀಚಿನ ದಿನಗಳಲ್ಲಿ ವಿಚ್ಛೇದನೆ ಪಡೆಯುತ್ತಿರುವ ಮಹಿಳೆಯರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೂ ಇದ್ದು, ಇದಕ್ಕೆ ಕೌಟುಂಬಿಕ ವಲಯದಲ್ಲಿನ ಹಲವಾರು ರೀತಿಯ ಸಾಮಾಜಿಕ, ಸಾಂಸ್ಕೃತಿಕ ಪುರುಷನಿಷ್ಠ ಮೌಲ್ಯಗಳು ಕಾರಣವಾಗಿವೆ. ಈ ಮೌಲ್ಯಗಳು ಸ್ತ್ರೀಯರನ್ನು ನಿಯಂತ್ರಿಸುವಲ್ಲಿ ಮಹತ್ವದ ಪಾತ್ರವಹಿಸಿವೆ. ಇಂತಹ ಪುರುಷನಿಷ್ಠ ಮೌಲ್ಯಗಳ ಬಗೆಗೆ ಮಹಿಳೆಯರಲ್ಲಿ ಜಾಗೃತಿ ಮೂಡಿದೆ. ಈ ಹಿನ್ನೆಲೆಯಿಂದ ವಿವಾಹ ಸಂಸ್ಥೆಯಲ್ಲಿನ ಬಿಗಿನಿಲುವಿನ ಸ್ಥಿತಿಯಿಂದ ಇವರು ಹೊರಬರಲು ಪ್ರಾರಂಭಿಸಿದ್ದಾರೆ. ಈ ವಿಚ್ಛೇದನೆ ಬಹಳ ಸಂಕೀರ್ಣವಾಗಿದ್ದು, ಈ ಪ್ರಕ್ರಿಯೆಯು ಎಲ್ಲಾ ಜಾತಿ, ವರ್ಗ ಪ್ರದೇಶದಲ್ಲಿ ನಡೆಯುತ್ತದೆ. ಯಾವ ಅಪೇಕ್ಷೆಗಾಗಿ ಮಹಿಳೆಯರು ವಿಚ್ಛೇದನೆ ಪಡೆಯುತ್ತಿದ್ದಾರೆ? ಎನ್ನುವ ಪ್ರಶ್ನೆ ಹಾಕಿಕೊಂಡ್ರೆ,

ಪ್ರಕರಣಗಳ ಹಿನ್ನೆಲೆಯಿಂದ ವಿಚ್ಛೇದನೆ ಪಡೆದಿರುವ ಮಹಿಳೆಯರು ವ್ಯಕ್ತಪಡಿಸಿದ ಅಪೇಕ್ಷೆಗಳನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ವಿಚ್ಛೇದನ ಅಪೇಕ್ಷೆಯ ನೆಲೆಗಳನ್ನು ಎರಡು ನೆಲೆಗಳಲ್ಲಿ ಗುರುತಿಸಬಹುದು.

- **ಗಂಡನೆಂಬ ವ್ಯಕ್ತಿಯಿಂದ ಬಿಡುಗಡೆ (ವಿಚ್ಛೇದನೆ)**
- **ವಿವಾಹವೆಂಬ ಸಂಸ್ಥೆಯಿಂದ ಬಿಡುಗಡೆ (ವಿಚ್ಛೇದನೆ)**

- **ಗಂಡನೆಂಬ ವ್ಯಕ್ತಿಯಿಂದ ಬಿಡುಗಡೆ (ವಿಚ್ಛೇದನೆ) :**

ಗಂಡನೆಂಬ ವ್ಯಕ್ತಿಯಿಂದ ಬಿಡುಗಡೆ ಬಯಸುವ ಮಹಿಳೆಯರಿಗೆ 'ವಿವಾಹ' ಎಂಬ ಸಂಸ್ಥೆಯ ಬಗೆಗೆ ಆಗಲೀ ಅಥವಾ 'ಗಂಡ'ನೆಂಬ ಪರಿಕಲ್ಪನೆಯ ಬಗೆಗೆ ಆಗಲೀ ತಕರಾರಿಲ್ಲ ಮತ್ತು ತಿರಸ್ಕಾರ ವಿರುವುದಿಲ್ಲ. ಬದಲಿಗೆ, ಅವರು ತಮ್ಮ ಜೊತೆಗೆ ಬಾಳುತ್ತಿರುವ ಗಂಡನೆಂಬ ವ್ಯಕ್ತಿಯ ಬಗ್ಗೆ ತಿರಸ್ಕಾರ ವಿರುತ್ತದೆ. ಹಾಗಾಗಿ ಅವರು ತಮಗೆ ಹೊಂದಾಣಿಕೆಯಾಗುವ ಮತ್ತೊಬ್ಬ ವ್ಯಕ್ತಿಯನ್ನು ಗಂಡನನ್ನಾಗಿ ಪಡೆಯಲು ಇಷ್ಟಪಡುತ್ತಿದ್ದಾರೆ. ಅಂದರೆ ಇವರು ಮರುವಿವಾಹ ಕುರಿತು ಇತ್ಯಾತ್ಮಕವಾಗಿ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಿದ್ದಾರೆ. ಅವರು ಪ್ರಕಾರ ವಿಚ್ಛೇದನೆ ಅಥವಾ ಬಿಡುಗಡೆ ಎಂದರೆ ಗಂಡನೆನಿಸಿಕೊಂಡ ವ್ಯಕ್ತಿಯಿಂದ ಅಂದರೆ ಅವನ ದುಷ್ಟ ವರ್ತನೆಗಳಿಂದ, ದುಷ್ಟಚಟಗಳಿಂದ, ಅವನ ಸ್ವಹಿಂಸಾರತಿ(Sadism) ಯಿಂದ ಮುಕ್ತಿ ಹೊಂದುವುದಾಗಿದೆ. ಗಂಡನ ಆಸ್ತಿ, ಆಕಾಂಕ್ಷೆ, ವ್ಯಕ್ತಿತ್ವ ತಕ್ಕಂತೆ ಮಹಿಳೆಯರ ಆಸೆ-ಆಕಾಂಕ್ಷೆ ವ್ಯಕ್ತಿತ್ವವನ್ನು ಹೊಂದಿಸಿಕೊಳ್ಳಬೇಕೆಂದು ಒತ್ತಾಯಿಸುವ ವ್ಯಕ್ತಿಯನ್ನು ವಿರೋಧಿಸುತ್ತಿದ್ದಾರೆ. ಈ ಹಿನ್ನೆಲೆಯಿಂದ ತಮ್ಮ ವ್ಯಕ್ತಿತ್ವಕ್ಕೆ ಕುಂದುಂಟುಮಾಡುವ ವ್ಯಕ್ತಿಯಿಂದ ವಿಚ್ಛೇದನೆ ಪಡೆಯಲು ಬಯಸುತ್ತಿದ್ದಾರೆ.

ಸಮಾಜ ಗ್ರಹಿಕೆಯಲ್ಲಿ ಗಂಡ ಅಂದರೆ ಧೀರ, ಶೂರ, ವೀರ, ಎಂದು ಹೇಳುವ ಮೂಲಕ ಗಂಡನೆನಿಸಿಕೊಂಡವನಿಗೆ ಸಮಾಜ ವಿಶೇಷ ಅಧಿಕಾರವನ್ನು ಒದಗಿಸುತ್ತದೆ. ಅಷ್ಟೇ ಅಲ್ಲ, ಈ ಅಧಿಕಾರವು ಗಂಡನು ಹೆಂಡತಿಗೆ ಕೊಡುವ ಹಿಂಸೆಗೆ ವಿಶೇಷ 'ಪರವಾನಿ'ಗೆಯನ್ನು ಸಹ ನೀಡುತ್ತದೆ. ಈ ಪರವಾನಿಗೆ ಮಹಿಳೆಯರ ಸ್ಥಿತಿಯನ್ನು ಮತ್ತು ಅವರ ಮೇಲಾಗುವ ದೌರ್ಜನ್ಯವನ್ನು ತಿಳಿಸುತ್ತದೆ. ಗಂಡನೆನಿಸಿಕೊಂಡವನಿಗೆ ಹೆಂಡತಿ ಖಾಸಗಿ ಆಸ್ತಿಯಾಗಿ ಬಾಳಬೇಕು. ಹೆಂಡತಿಯಾದವಳು ಕುಟುಂಬದ ಮಾನ, ಮಾರ್ಯದೆ ಮತ್ತು ಗಂಡನ ಘನತೆ, ಗೌರವಗಳನ್ನ ಕಾಪಾಡಬೇಕು. ಹಾಗೆಯೇ ಗಂಡನಿಗೆ ಅಗೌರವ ತರುವ ಯಾವ ಕೆಲಸ ಕಾರ್ಯಗಳನ್ನು ಮಾಡಬಾರದು ಮತ್ತು ತನ್ನಗಿರುವ ಜವಾಬ್ದಾರಿಗಳನ್ನು ಸರಿಯಾಗಿ ಪಾಲಿಸದಿದ್ದಾಗ ಅವಳಿಗೆ ಗಂಡನಿಂದ ದೈಹಿಕ ಮತ್ತು ಮಾನಸಿಕ ಹಿಂಸೆ ನಡೆಯುತ್ತದೆ. ಈ ಹಿನ್ನೆಲೆಯಿಂದ ಮಹಿಳೆಯರು ಈ ತರಹದ ಪ್ರವೃತ್ತಿ ಇರುವ ಗಂಡಂದಿರನ್ನು ತಿರಸ್ಕರಿಸುತ್ತಿರುವುದು ಮಹಿಳೆಯರ ಬದಲಾವಣೆಯ ದಾರಿಯನ್ನು ತೋರಿಸುತ್ತದೆ. ಈ ಬದಲಾವಣೆ ಬಯಸುವ ಮಹಿಳೆಯರು, ಗಂಡನೆಂಬ ವ್ಯಕ್ತಿಯಿಂದ ವಿಚ್ಛೇದನೆ ಪಡೆದವರು ತಮ್ಮದೇ ಆದ ಅಪೇಕ್ಷೆಗಳನ್ನು ವ್ಯಕ್ತಪಡಿಸಿದ್ದಾರೆ.

**ಆ ಅಪೇಕ್ಷೆಗಳೆಂದರೆ :-**

ಪ್ರಕರಣ ಒಂದರಲ್ಲಿ, ಜಾನಕಿ ನನಗೆ ಗಂಡನಿಂದ ಬಿಡುಗೆ ಸಿಗಬೇಕು. ನಾನು ಚೆನ್ನಾಗಿ ಓದಿ ಒಂದು ಕೆಲಸ ತಗೊಂಡು ನನ್ನ ಹಣದಿಂದಾನೆ ನಾನು ಬದುಕಬೇಕು ಎಂದು ಹೇಳುತ್ತಾ, ಮಾತು ಮುಂದುವರಿಸುವ ಈಕೆ ಮರುಮದುವೆ ಬಗೆಗೆ ಹೀಗೆ ಪ್ರತಿಕ್ರಿಯೆಸುತ್ತಾರೆ. ಎಲ್ಲ ಗಂಡಸರು ಅವನ್ನಂಗೆ ಕೆಟ್ಟವರು ಇರುವುದಿಲ್ಲ, ಪ್ರಪಂಚದಲ್ಲಿ ಒಳ್ಳೆಯವರು ಇರುತ್ತಾರೆ. ನಾನು ನನ್ನ ಆಸೆ-ಆಕಾಂಕ್ಷೆಗಳಿಗೆ ಸ್ಪಂದಿಸುವ ನನ್ನ ಕೆಲಸ, ವರ್ತನೆಗಳನ್ನು ಗೌರವದಿಂದ ಕಾಣುವ ನನ್ನ ಲೈಂಗಿಕತೆಯ ಮತ್ತು ಚಲನವಲನಗಳ ಬಗೆಗೆ ನಂಬಿಕೆ ಇರುವ, ವರದಕ್ಷಿಣೆ ಇಷ್ಟಪಡದ ವ್ಯಕ್ತಿ ನನಗೆ ಇಷ್ಟ. ಇಂತಹ ವ್ಯಕ್ತಿ ದೊರೆತರೆ ಮರುವಿವಾಹ ಬಗೆಗೆ ಸಕಾರತ್ಮಕ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದಾರೆ.

ಪ್ರಕರಣ ಎಂಟರಲ್ಲಿ ಲಕ್ಷ್ಮಿ ವಿಚ್ಛೇದನೆ ಪಡೆದು ಖಾಸಗಿ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮುಂದಿನ ಜೀವನದಲ್ಲಿ ಮರುವಿವಾಹದ ಬಗೆಗೆ ಒಲವು ವ್ಯಕ್ತಪಡಿಸುತ್ತಿರುವ ಈಕೆ ಹೀಗೇ ಪ್ರಕ್ರಿಯಿಸುತ್ತಾಳೆ. "ನನ್ನ ಮನಸ್ಸಿಗೆ ಇಷ್ಟ ಆಗುವ ಕುಟುಂಬ ಒಳಗೊಂಡು ಎಲ್ಲ ವಿಷಯಗಳ ಬಗೆಗೆ ಅಂದರೆ ಕೆಲಸ, ಅಡಿಗೆ, ಇನ್ನಿತರ ಕೆಲಸಗಳಿಗೆ ಹೊಂದಾಣಿಕೆ ಆಗುವ ಹುಡುಗ ಸಿಕ್ಕರೆ, ನನ್ನ ಕೆಲಸಗಳನ್ನು ಗೌರವಿಸುವಂಥ ವ್ಯಕ್ತಿ ಸಿಕ್ಕರ್ರೆ ಮರುಮದುವೆ ಆಗುತ್ತೀನಿ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದಾರೆ.

ಪ್ರಕರಣ ಐದರಲ್ಲಿ ಗಂಡನಿಂದ ವಿಚ್ಛೇದನ ಪಡೆದ ಶಾರದ ಹಾಸ್ಟೆಲ್‌ನಲ್ಲಿ ಕೆಲಸ ಮಾಡುತ್ತಿದ್ದಾಳೆ. ಮತ್ತೊಂದು ಮದುವೆ ಬಗೆಗೆ ಪ್ರಸ್ತಾಪಿಸುವ ಈಕೆ ನಾವು ಮದುವೆಯಾಗ್ತೀವಿ ಅಂದ್ರೆ ನಮ್ಮಂಥವರನ್ನು ಯಾರು ಮದುವೆ ಆಗುತ್ತಾರೆ? ಎಂಬ ಭಿನ್ನ ತುಂಬಾ ಸಂಕೀರ್ಣ ಮತ್ತು ಗಂಭೀರವಾದ ಪ್ರಶ್ನೆ ಹಾಕುತ್ತಾರೆ. ಈ ಮೂಲಕ ಮರುವಿವಾಹದ ಬಗೆಗೆ ಸಮಾಜ ನಿಲುವನ್ನೇ ಪ್ರಶ್ನಿಸುತ್ತಾರೆ. ಇದು ಸಮಾಜ ಬಗೆಗೆ ಮಹಿಳೆಗಿರುವ ಭಿನ್ನ ಗ್ರಹಿಕೆಯನ್ನು ಸೂಚಿಸುತ್ತದೆ. ಅಂದರೆ ಹೆಣ್ಣು ಎಂದರೆ ಒಂದು ವಸ್ತು ಇದ್ದ ಹಾಗೆ. ಅದರಲ್ಲಿ ಲೈಂಗಿಕತೆಗೆ ಬಹಳ ಪ್ರಾಮುಖ್ಯತೆಯನ್ನು ಕಲ್ಪಿಸಲಾಗಿದೆ. ಹೀಗಾಗಿ ಮರುಮದುವೆ ಕಷ್ಟ ಎನ್ನುವ ಧ್ವನಿ ಇದರಲ್ಲಿ ಇದೆ. ಸಮಾಜ ಹೆಣ್ಣನ್ನು ಗ್ರಹಿಸುವ ನೆಲೆಗಿಂತ ಭಿನ್ನವಾದ ನೆಲೆಯಲ್ಲಿ ಗ್ರಹಿಸುವ ಹುಡುಗ ಸಿಕ್ಕರ್ರೆ ಅಂದರೆ ಅವನು ಮಹಿಳೆಯನ್ನು ಒಂದು ಜೀವಿ ಅಂತ ತಿಳಿದು ನನ್ನ ದಿನನಿತ್ಯ ಚಲನವಲನಗಳನ್ನು, ಲೈಂಗಿಕತೆಯ ಹಿನ್ನೆಲೆಯಲ್ಲಿ ಅನುಮಾನಿಸದೇ ದೈಹಿಕವಾಗಿ, ಮಾನಸಿಕವಾಗಿ ಹಿಂಸಿಸದೇ ನನ್ನ ಪ್ರತಿಯೊಂದು ಕೆಲಸಗಳನ್ನು ಪ್ರೋತ್ಸಾಹಿಸುವ ಮತ್ತು ಗೌರವಿಸುವ ವ್ಯಕ್ತಿ ಸಿಕ್ಕರೆ ಮರುಮದುವೆ ಆಗುತ್ತೇನೆ ಎಂಬ ಅಪೇಕ್ಷೆಯನ್ನು ಹೊಂದಿದ್ದಾರೆ.

ಈ ಮೇಲ್ಕಂಡ ಪ್ರಕರಣಗಳಲ್ಲಿ ಮಹಿಳೆಯರು ವಿವಾಹವೆಂಬ ಸಂಸ್ಥೆಯನ್ನು ನಿರಾಕರಿಸದೇ ಗಂಡನೆಂಬ ವ್ಯಕ್ತಿಯಲ್ಲಿರುವ ನಡುವಳಿಕೆ ಅದು ತಮಗೆ ವಿರೋಧಿಸುವ ನಡುವಳಿಕೆಯನ್ನು ಪ್ರಯತ್ನಿಸುತ್ತಾರೆ. ತಮ್ಮ ಗುಣ ಸ್ವಭಾವ ವೃತ್ತಿಗಳಿಗೆ ಹೊಂದಾಣಿಕೆ ಆಗುವ ತಮ್ಮ ಕೆಲಸವನ್ನು ಗೌರವಿಸುವ ತಮ್ಮ ಆಸೆ-

ಆಕಾಂಕ್ಷೆಗಳಿಗೆ ಸ್ಪಂದಿಸುವ ಉತ್ತಮ ನಡುವಳಿಕೆಯ ಗಂಡು ಸಿಕ್ಕರೆ ಮದುವೆ ಆಗುವ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತಿದ್ದಾರೆ. ಅಂದರೆ ಗಂಡನಿಂದ ವಿಚ್ಛೇದನೆ ಪಡೆದ ಮಹಿಳೆಯರು ಮತ್ತೊಬ್ಬನನ್ನು ಗಂಡನಾಗಿ ಪಡೆಯುವ ಮೂಲಕ ವಿವಾಹ ಸಂಸ್ಥೆಯಲ್ಲಿ ಇರಲು ಇಷ್ಟಪಡುತ್ತಿದ್ದಾರೆ. ಈ ಅಪೇಕ್ಷೆಯನ್ನು ವ್ಯಕ್ತಪಡಿಸುವ ಮಹಿಳೆಯರು ತಮ್ಮ ಸ್ವತಂತ್ರ ಮತ್ತು ಅಸ್ತಿತ್ವಕ್ಕೆ ಧಕ್ಕೆ ಆಗದವರನ್ನೇ ಆಯ್ಕೆ ಮಾಡಿಕೊಳ್ಳುವ ಅಭಿಲಾಷೆಯನ್ನು ವ್ಯಕ್ತಪಡಿಸಿದ್ದಾರೆ ಎಂದು ಹೇಳಬಹುದು.

ಇದುವರೆಗೆ ಸಾಮಾಜಿಕ, ಸಾಂಸ್ಕೃತಿಕ ಮೌಲ್ಯಗಳು ಹೆಣ್ಣು ಪರಾವಲಂಬಿ ಎಂದು ಬಗೆದಿದ್ದವು. ಆದರೆ, ಪ್ರಸ್ತುತದಲ್ಲಿ ಕಾನೂನುಗಳು ಮಹಿಳೆಯರ ಸಬಲೀಕರಣಗೊಳಿಸಲು ಸಾಧ್ಯವಾಗಿವೆ. ಜೊತೆಗೆ ಸಾಮಾಜಿಕ ಸುಧಾರಣೆ ಭಾಗವಾಗಿ ಬಂದ ನೀತಿಗಳು ಸೃಷ್ಟಿಸಿದ ಉದ್ಯೋಗಾವಕಾಶಗಳು ಮಹಿಳೆಗೆ ಸ್ವತಂತ್ರ ಸ್ವಾವಲಂಬನೆ ಬದುಕಿನ ಜೊತೆಗೆ ಅವರಲ್ಲಿ ಮಾನಸಿಕ ಸ್ಥೈರ್ಯ ಮೂಡಿಸಿದೆ. ಈ ಮೂಲಕ ಅವಳ ಸಮಾಜದಲ್ಲಿ ಸಮಾನತೆಯನ್ನು ಬಯಸುತ್ತಿದ್ದಾಳೆ.

ಒಟ್ಟನಲ್ಲಿ ಗಂಡನೆಂಬ ವ್ಯಕ್ತಿಯಿಂದ ಬಿಡುಗಡೆ ಪಡೆದಿರುವ ಮಹಿಳೆಯರು ಗಂಡ-ಹೆಂಡತಿಯರ ಸಂಬಂಧವನ್ನೇನು ಅವರು ನಿರಾಕರಿಸುತ್ತಿಲ್ಲ. ಬದಲಿಗೆ ಅವರ ಗಂಡನೆಂಬ ವ್ಯಕ್ತಿಯನ್ನು ಮತ್ತು ಅವನು ತಮ್ಮ ಮೇಲೆ ಹೇರಲಾದ ನಿಯಮಾವಳಿಗಳನ್ನು ಮತ್ತು ಅವನ ಮನೋಭಾವನೆಯನ್ನು ಪ್ರಶ್ನಿಸುತ್ತಾರೆ, ತಿರಸ್ಕರಿಸುತ್ತಾರೆ. ಜೊತೆಗೆ ಅವರು ತಮ್ಮ ಬದುಕಿನ ಗುರಿಯ ಬಗೆಗೆ ಆ ಗುರಿಯ ಸಾಧನೆಯ ಬಗೆಗೆ ಆಕೆಗೆ ಸ್ವತಂತ್ರ ಕಲ್ಪನೆಗಳಿವೆ. ಇಂತಹ ಆಶೋತ್ತರಗಳಿಗೆ ಸ್ಪಂಧಿಸುವ ಸಂಗಾತಿಗಾಗಿ ಮಹಿಳೆಯರು ಅಪೇಕ್ಷಿಸುತ್ತಿದ್ದಾರೆ.

- **ವಿವಾಹವೆಂಬ ಸಂಸ್ಥೆಯಿಂದ ಬಿಡುಗಡೆ (ವಿಚ್ಛೇದನೆ) :**

ಪ್ರಸ್ತುತ ಸಮಾಜದಲ್ಲಿ ವಿವಾಹ ವಿಚ್ಛೇದನ ಪ್ರಕರಣಗಳು ಅಧಿಕವಾಗುತ್ತಿವೆ. ಆದರೆ ವಿಚ್ಛೇದನೆ ಪಡೆದ ಕೆಲವು ಮಹಿಳೆಯರು ಮರುವಿವಾಹದ ಬಗ್ಗೆ ಒಲವು ವ್ಯಕ್ತಪಡಿಸುತ್ತಿದ್ದಾರೆ. ಅವರು ಮರುವಿವಾಹ ಆಗಲು ಸಿದ್ಧರಿದ್ದಾರೆ. ಆದರೆ ಇನ್ನೂ ಕೆಲವು ಮಹಿಳೆಯರು ವಿವಾಹ ಸಂಸ್ಥೆ ಮತ್ತು ಗಂಡನೆಂಬ ವ್ಯಕ್ತಿಯ ಬಗೆಗೆ ತಕರಾರು ಎತ್ತುತ್ತಿದ್ದಾರೆ. ಜೊತೆಗೆ ಅದನ್ನು ನಿರಾಕರಿಸುತ್ತಿದ್ದಾರೆ. ಈ ಮೂಲಕ ಅವರು ತಮ್ಮ ಸಾಮಾಜಿಕತೆಯಲ್ಲಿ ಲಭ್ಯವಾಗುವ ಅವಕಾಶಗಳಲ್ಲೇ ತಮ್ಮ ಅಸ್ತಿತ್ವ ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ಇವತ್ತಿನ ಕೆಲವು ಸ್ತ್ರೀಯರಿಗೆ ವೈವಾಹಿಕ ಬದುಕಿನಲ್ಲಿನ ಸಮಸ್ಯೆಗಳಿಗೆ ವಿಚ್ಛೇದನೆಯು ಮುಕ್ತಿ ನೀಡುವ ಮಾರ್ಗವಾಗಿದೆ. ಕುಟುಂಬದಲ್ಲಿನ ಹೊಂದಾಣಿಕೆ ಆಗದ ಸಂದರ್ಭಗಳು ಹಾಗೂ ಮಾನಸಿಕ ಹಿಂಸೆಗಳು ಮುಂತಾದ ಪರಿಸ್ಥಿತಿಗಳು ಮಹಿಳೆಯರು ವಿವಾಹವೆಂಬ ಸಂಬಂಧದಿಂದ ಹೊರಬರಲಿಕ್ಕೆ ಕಾರಣಗಳಾಗಿವೆ. ವಿವಾಹ ಸಂಸ್ಥೆಯು ಹುಟ್ಟು ಹಾಕುವ ಪಿತೃಪ್ರಧಾನ ಮೌಲ್ಯಗಳಿಂದ ಮಹಿಳೆ ಅನೇಕ ರೀತಿ ಹಿಂಸೆಗಳಿಗೆ ಒಳಗಾಗಿರುವುದರಿಂದ ವಿವಾಹ ಸಂಸ್ಥೆಯನ್ನು ನಿರಾಕರಿಸುವ ಹಂತ ತಲುಪಿದ್ದಾರೆ.

ವಿವಾಹವೆಂದರೆ ದೈವದ ಬಂಧನವೆಂಬುದು ಸಮಾಜದ ಗ್ರಹಿಕೆ. ಈ ಗ್ರಹಿಕೆಯಿಂದ ಮಹಿಳೆಯರಿಗೆ ಅನೇಕ ಸಮಸ್ಯೆಗಳು ಸೃಷ್ಟಿ ಆಗಿವೆ. ಇವುಗಳು ಅವರ ಬದುಕನ್ನು ಹಿಂಸಾತ್ಮಕವಾಗಿಸಿವೆ. ವಿವಾಹ ಸಂಸ್ಥೆಯು ಮಹಿಳೆಯಿಂದ ಅನೇಕ ರೀತಿಯ ನಡುವಳಿಕೆಯನ್ನು ನಿರೀಕ್ಷಿಸುತ್ತದೆ ಮತ್ತು ಹಲವು ಬಗೆಯ ಪಾತ್ರಗಳನ್ನು ಅಪೇಕ್ಷಿಸುವುದರಿಂದ; ಆಕೆಯ (ಮಹಿಳೆಯ) ಅಭಿರುಚಿ, ಆಸಕ್ತಿ ಆಯ್ಕೆ, ಸ್ವತಂತ್ರ ನಗಣ್ಯವಾಗುತ್ತಿವೆ. ತನ್ನ ಪತಿ ಹಾಗೂ ಆತನ ಕುಟುಂಬದ ಸದಸ್ಯರ ಸೇವೆಯನ್ನು ಮಾಡಲೇಬೇಕೆನ್ನುವ ಪರಂಪರಾಗತವಾದ ಮೌಲ್ಯಗಳು ಮಹಿಳೆಗೆ ತನ್ನ ಸಾಮಾಜಿಕ ವ್ಯಕ್ತಿತ್ವವನ್ನು ರೂಪಿಕೆಗೆ ಅಡ್ಡಿಯನ್ನುಂಟುಮಾಡಿವೆ. ಅವಳು ಸದಾಕಾಲ ಪುರುಷನ ಮತ್ತು ಅವನ ಕುಟುಂಬದ ಅಧೀನದಲ್ಲಿರಲೇಬೇಕು. ಅವಳ ನಡೆ-ನುಡಿ ವಿಚಾರಗಳಲ್ಲಿ ಕುಟುಂಬದ ಹಿರಿಯರ ಆದೇಶ ಸೂಚನೆಯನ್ನು ಮೀರುವಂತಿಲ್ಲ. ಇನ್ನೂ ಅನೇಕ ಪುರುಷನಿಷ್ಠ ಮೌಲ್ಯಗಳಿಂದ ವಿವಾಹ ಸಂಸ್ಥೆ ತುಂಬಿಕೊಂಡಿದೆ. ಇವುಗಳು ಆಕೆಯ ಸ್ವಾತಂತ್ರ್ಯ ಸ್ವಾಭಿಮಾನಕ್ಕೆ ಧಕ್ಕೆಯುಂಟುಮಾಡಿವೆ. ಜೊತೆಗೆ ಕುಟುಂಬದೊಳಗಡೆ ಮಹಿಳೆಯನ್ನು ಪರಾಧೀನತೆ ವರ್ತುಲದಲ್ಲಿ ಸಿಕ್ಕಿ ಹಾಕಿಕೊಳ್ಳುವಂತೆ ಮಾಡಿವೆ. ಆಕೆ ಗಂಡ ಮತ್ತು ಆತನ ಮನೆಯವರ ನಿರೀಕ್ಷೆಗಳನ್ನು ಪೂರೈಸದಿದ್ದಾಗ ಮಹಿಳೆಯರಿಗೆ ಗಂಡನ ಮನೆಯಲ್ಲಿ ನಿರೀಕ್ಷೆಗೂ ಮೀರಿದ ಹಿಂಸೆಗಳು ನಡೆಯುತ್ತಿವೆ. ಇದರಿಂದ ವಿವಾಹ ಸಂಸ್ಥೆಯಲ್ಲಿ ಸಿಲುಕಿ ಹಾಕಿಕೊಂಡಿರುವ ಮಹಿಳೆಯರಿಗೆ ವ್ಯಕ್ತಿತ್ವದ ದಮನ ನಡೆಯುತ್ತಿದೆ ಎಂಬುದು ಖಚಿತ.

ಸಮಾಜದಲ್ಲಿ ವಿವಾಹವು ಪತಿಯಾದವನಿಗೆ ಪತ್ನಿಯ ಮೇಲೆ ಎಲ್ಲ ಹಕ್ಕು ಅಧಿಕಾರಗಳನ್ನು ನೀಡಿ ಅವಳನ್ನು ಅತಂತ್ರದ ಸ್ಥಿತಿಗೆ ತಲುಪಿಸಲಾಗಿದೆ. ಇತರರ ಸುಖಕ್ಕಾಗಿ ಜೀವ ಸವೆಸುವುದರಲ್ಲೇ ನಿನ್ನ ಸುಖವಿದೆ ಎಂಬುದನ್ನು ಒತ್ತಾಯಪೂರ್ವಕವಾಗಿ ಆಕೆಗೆ ನಂಬಿಸಲಾಗಿರುವ ವ್ಯವಸ್ಥೆಯಲ್ಲಿ ತನ್ನ ಸುಖವನ್ನು ಕುರಿತು ಮಾತನಾಡಿದರೆ ಆಕೆಗೆ ಅಪರಾಧವೆನಿಸುತ್ತದೆ. ಇಂತಹ ಬದುಕಿನಲ್ಲಿ ಗಂಡನು ಉಂಡರೆ ಹೆಂಡತಿ ಉಂಡಂತೆ, ಗಂಡ ನಕ್ಕರೆ ಹೆಂಡತಿ ನಕ್ಕಂತೆ ಎಂದು ಹೇಳುವಂಥ ಅನಿವಾರ್ಯ ಸ್ಥಿತಿಯನ್ನು ಸೃಷ್ಟಿಸಿದೆ. ಇದು ಅವಳ ಜೀವನವನ್ನು ಎರಡನೇ ದರ್ಜೆಯ ಪ್ರಜೆಯಾಗಿಸಿದೆ.

ಇತ್ತೀಚಿನ ದಿನಗಳಲ್ಲಿ ಮಹಿಳೆಯರು ತಾನು ಒಬ್ಬ ವ್ಯಕ್ತಿಯಾಗಿ ಪರಿಗಣಿತವಾಗಬೇಕೆಂದು ಬಯಸುತ್ತಿದ್ದಾಳೆ. ಈ ಹಿನ್ನೆಲೆಯಿಂದ ತನ್ನದೇ ಆದ ನಾಜೂಕಾದ ಕನಸುಗಳನ್ನು ಕಟ್ಟಿಕೊಳ್ಳುತ್ತಿದ್ದಾಳೆ. ಆ ಕನಸುಗಳನ್ನು ಸಾಕಾರಗೊಳಿಸುವುದಕ್ಕಾಗಿ ಹಾತೊರೆಯುತ್ತಿದ್ದಾಳೆ. ಅಂತಹ ಕನಸುಗಳಲ್ಲಿ ಆರ್ಥಿಕ, ಸ್ವಾತಂತ್ರ ಮತ್ತು ಆರೋಗ್ಯ ಪೂರ್ಣ ಬಾಳು ಸೇರಿಕೊಂಡಿವೆ. ಹಾಗಾಗಿ ಸಂಸಾರ ಎನ್ನುವ ಜಂಜಾಟದಿಂದ ದೂರ ಉಳಿಯಲು ಪ್ರಯತ್ನಿಸುತ್ತಿರುವುದು ಕಂಡು ಬರುತ್ತದೆ.

ಮಹಿಳೆಯರು ನಾಲ್ಕು ಗೋಡೆಗಳನ್ನು ಬೇಧಿಸಿ ಹೊರಬರುವುದನ್ನು ನೋಡಿದರೆ ಆಕೆಯ ಅಪೇಕ್ಷೆಗಳು ವೈಯಕ್ತಿಕ ನೆಲೆಯಲ್ಲಿ ನಿಲ್ಲುವ ಹಾದಿಯ ಶೋಧ ನಡೆಸುತ್ತಿರುವುದು ಕಂಡು ಬರುತ್ತದೆ. ಇದರಿಂದ ಒಬ್ಬ ಹೆಣ್ಣು ತನಗೆ ನಿಗದಿತವಾದ ಚೌಕಟ್ಟುಗಳನ್ನು ಮೀರುವ ಸಂದರ್ಭಗಳು ಅವಳ ಒಳಗಿನ

ಒತ್ತಡಗಳಾಗಿವೆ. ಅಷ್ಟೇ ಅಲ್ಲ, ಈ ಸಂದರ್ಭದಲ್ಲಿ ಮಹಿಳೆಯರಿಗೆ ತಮ್ಮನ್ನು ತಾವು ಉಳಿಸಿಕೊಳ್ಳಬೇಕಾದ ಅನಿವಾರ್ಯತೆಗಳು ಸಹ ಆಗಿವೆ.

ವಿವಾಹ ಸಂಸ್ಥೆಯು ಮಹಿಳೆಯರಿಗೆ ತಮ್ಮ ಗುರಿ, ಸಾಧನೆಗಳ ಕುರಿತು ಆಲೋಚಿಸಿದಂತೆ ಬಂಧಿಸಿದೆ. ಇದು ಮಹಿಳೆಯರನ್ನು ಸಾರ್ವಜನಿಕ ವಲಯದಲ್ಲಿ ಪ್ರವೇಶಿಸಿದಂತೆ ತಡೆಯುತ್ತಿದ್ದು, ಆಕೆಯನ್ನು ಕುಟುಂಬದ ಒಳಗಡೆ ದಾಂಪತ್ಯದ ಒಳಗಡೆ ಜೀವಿಸುವಂತೆ ಮಾಡಿದೆ. ಈ ಹಿನ್ನೆಲೆಯಿಂದ ಅವಳು ಒಂಟಿಯಾಗಿ ಮನೆಯ ಮಿತಿಯೊಳಗಡೆ ಅಸಹಾಯಕಳಾಗಿಸಲು ವಿವಾಹ ಸಂಸ್ಥೆ ಪ್ರಜ್ಞಾಪೂರ್ವಕವಾಗಿ ಅವಳನ್ನ ನಿಯಂತ್ರಿಸುವ ಮೌಲ್ಯಗಳನ್ನು ಬಿಗಿಗೊಳಿಸುತ್ತಿದೆ. ಈ ಮೂಲಕ ಸಮಾಜ ಹೆಣ್ಣಿನಿಂದ ಅನೇಕ ಸಂಗತಿಗಳನ್ನು ಕಸಿದುಕೊಂಡು ಮಹಿಳೆಯ ಮೇಲಿನ ಅಧಿಕಾರವನ್ನು ಗಂಡಿಗೆ ಒದಗಿಸುವುದರಿಂದ ಹೆಂಡತಿಯು ಗಂಡನ ಅಡಿಯಾಳಾಗಿ ಬದುಕು ಮಾಡಬೇಕಾದ ಪ್ರಮೇಯವನ್ನು ವಿವಾಹ ಸೃಷ್ಟಿಸಿದೆ. ಈ ಕಾರಣಕ್ಕಾಗಿ ಅಧೀನ/ನಿಯಂತ್ರಣ/ನಿರ್ಬಂಧನೆಗಳು ಮಹಿಳೆಯರಿಗೆ ಕಿರುಕುಳ, ಹಿಂಸೆ ಮುಂತಾದ ಸಮಸ್ಯೆಗಳನ್ನು ಸೃಷ್ಟಿಸುತ್ತಿದೆ. ಸಂದರ್ಶಿಸಿದ ಮಹಿಳೆಯರಲ್ಲಿ ಕೆಲವರು ವಿಚ್ಛೇದನೆಯ ಮೂಲಕ ವಿವಾಹ ಸಂಸ್ಥೆಯಿಂದ ದೂರ ಉಳಿಯಲು ಬಯಸುತ್ತಿದ್ದಾರೆ. ಇದಕ್ಕೆ ಪೂರಕವಾಗಿ ಈ ಮಹಿಳೆಯರು ತಮ್ಮದೇ ಆದ ಅಪೇಕ್ಷೆಗಳನ್ನು ವ್ಯಕ್ತಪಡಿಸಿದ್ದಾರೆ.

**ಆ ಅಪೇಕ್ಷೆಗಳೆಂದರೆ :-**

ಪ್ರಕರಣ ಎರಡರಲ್ಲಿ 'ಕನಕ' ಒಬ್ಬ ಗಂಡನ್ ಮಾಡಿಕೊಂಡು ಅನುಭವಿಸಿದ್ದೆ ಸಾಕು. ಇನ್ನೊಬ್ಬ ಗಂಡನ ಉಸಾಬರಿಗೆ ಬೇಡ. ಎಲ್ಲ ಗಂಡಸರು ಇಷ್ಟ, ಎಂದು ಹೇಳ್ತಾ ನನಗಂತು ಓದೋದಕ್ಕೆ ಆಗಿಲ್ಲ. ನಾನು ನನ್ನ ಅಮ್ಮನ ವ್ಯಾಪಾರದಲ್ಲಿ ಸಹಾಯ ಮಾಡ್ತೀನಿ. ಅದರಲ್ಲಿ ನನ್ನ ಜೀವನ ರೂಪಿಸಿಕೊಳ್ಳುತ್ತೀನಿ. ಈ ಮೂಲಕ ನಾನು ನನ್ನ ತಂಗಿಯರಿಗಾದ್ರೂ ಓದಿಸಿ, ಅವರ ಕಾಲ ಮೇಲೆ ಅವರನ್ನ ನಿಲ್ಲುವ ಹಾಗೆ ಮಾಡಬೇಕು ಎಂಬ ಅನಿಸಿಕೆಯನ್ನು ವ್ಯಕ್ತಪಡಿಸುತ್ತಾರೆ. ನಾನು ಯಾರ ನೆರವಿಲ್ಲದೆ ಸ್ವತಂತ್ರವಾಗಿ ಜೀವನ ಸಾಗಿಸುತ್ತೀನಿ ಎನ್ನುತ್ತಾರೆ.

ಪ್ರಕರಣ ಆರರಲ್ಲಿ 'ಶಾಂತ' "ಇಷ್ಟಪಟ್ಟು ಮದುವೆಯಾದ ಗಂಡನ ಹಣೆಬರಹನೇ ಇಷ್ಟಿದೆ. ಅಂಥದರಲ್ಲಿ ಇನ್ನೊಂದು ಮದುವೇನಾ? ಎಲ್ಲ ಗಂಡಸರು ಮದುವೆಗೂ ಮುಂಚೆ ಪ್ರೀತಿ ತೋರಿಸುತ್ತಾರೆ. ಮದುವೆ ನಂತರ ಅಲಕ್ಷ್ಯ ಮಾಡುತ್ತಾರೆ. ಸರಿಯಾಗಿ ನಮ್ಮ ಜೊತೆ ಮಾತಾಡೋದಿಲ್ಲ. ತವರು ಮನೆಯಿಂದ ಹಣ ತೆಗೆದುಕೊಂಡು ಬರುವಂತೆ ಒತ್ತಾಯಿಸುತ್ತಾರೆ. ಹಣ ತರದೇ ಇದ್ರೆ ದೈಹಿಕ ಮಾನಸಿಕ ಹಿಂಸೆ ಮಾಡುತ್ತಾರೆ" ಎಂದು ಹೇಳುವ ಆಕೆ ಈಗಾಗಲೇ ಶಿಕ್ಷಕಿಯಾಗಿ ಕೆಲಸ ಮಾಡುತ್ತಾ ಇದ್ದೀನಿ. ಇದರಲ್ಲಿ ನಿಷ್ಠೆಯಿಂದ ಕೆಲಸ ಮಾಡುತ್ತೀನಿ. ಸ್ವತಂತ್ರ ಜೀವನ ಸಾಗಿಸುತ್ತೇನೆ ಎಂಬ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತಾರೆ.

ಪ್ರಕರಣ ಮೂರರಲ್ಲಿ ಪಾರ್ವತಿ ನನ್ನ ಗಂಡನಿಂದ ಬೇರೆ ಆಗಿದ್ದು, ಗುಹೆಯಿಂದ ಹೊರಗೆ ಬಂದಿದ್ದೀನಿ ಅನಿಸ್ತಾ ಎನ್ನುತ್ತಾರೆ. ಗಂಡನ್ನ ನೆನಪಿಸಿಸುವಂಥ ಯಾವುದು ನನಗೆ ಬೇಡ ಎನ್ನುವ ಆಕೆ

ಅವನು ಕಟ್ಟಿದ ಆ ತಾಳಿ ನೋಡಿದ್ರೆ ಸಾಕು. ನನಗೆ ಮೈಯಲ್ಲ ಉರಿಯುತ್ತದೆ. ಆದಷ್ಟು ಬೇಗ ಅವನು ಸತ್ತರೆ, ನನಗೂ ಈ ತಾಳಿಯಿಂದ ಮುಕ್ತಿ ಸಿಗುತ್ತದೆ ಎಂದು ಅವನು ಕಟ್ಟಿದ ತಾಳಿನು ಕಿತ್ತು ಬಿಸಾಕುವಂಥ ನಿಲುವನ್ನು ತೋರಿಸುತ್ತಾರೆ. ಬೇರೆಯವರ ಸಹಾಯದಿಂದ ಖಾಸಗಿ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದೀನಿ. ಒಂದು ವೇಳೆ ಈ ಕೆಲಸ ಹೋದ್ರು ಬೇರೆ ಯಾವುದಾದರೂ ಕೆಲಸಕ್ಕೆ ಸೇರಿ ನಾನು ಮತ್ತು ನನ್ನ ಮಗಳು ಬದುಕುಬಲ್ಲೆವು ಎನ್ನುವಂಥ ನಿಲುವನ್ನು ವ್ಯಕ್ತಪಡಿಸುತ್ತಿದ್ದಾರೆ.

ಈ ಎಲ್ಲ ಪ್ರಕರಣಗಳನ್ನು ಪರಿಶೀಲಿಸಿದಾಗ ವಿವಾಹ ಎಂಬ ಸಂಸ್ಥೆಯು ಮಹಿಳೆಯರ ಶೋಷಣೆ ಮೂಲವಾಗಿದೆ. ಅದು ವರದಕ್ಷಿಣೆ ಇರಬಹುದು. ಕೌಟುಂಬಿಕ ಹಿಂಸೆ ಇರಬಹುದು. ಲೈಂಗಿಕ ಕಿರುಕುಳ ಇರಬಹುದು. ಇವುಗಳಿಂದ ಮಹಿಳೆಯರು ರೋಸಿ ಹೋಗಿ ವಿವಾಹ ಸಂಸ್ಥೆಯನ್ನೇ ತಿರಸ್ಕರಿಸಿ ಹೊರಬಂದಿದ್ದಾರೆ. ಈ ಮೂಲಕ ತಮ್ಮ ಬದುಕಿನ ಬದಲಾವಣೆಯನ್ನು ಕಂಡುಕೊಳ್ಳಲಿಕ್ಕೆ ಸಮಾಜದ ವಿವಿಧ ವಲಯಗಳಲ್ಲಿ ತಮಗೆ ದೊರೆತ ವೃತ್ತಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಕೆಲಸದಲ್ಲಿ ಸಾಧನೆಗಳಿಂದ ತನ್ನನ್ನು ತಾನು ನಿರ್ವಚಿಸಿಕೊಳ್ಳುತ್ತಿದ್ದಾರೆ. ವಿವಾಹ, ಗಂಡನಿಂದ ಬಿಡುಗಡೆಗೊಂಡ ಮಹಿಳೆಯರು ಸಾಮಾಜಿಕ ರಂಗದಲ್ಲಿ ಪ್ರವೇಶಿಸಿ ತಮ್ಮ ಜೀವನವನ್ನು ರೂಢಿಸಿಕೊಳ್ಳುವಲ್ಲಿ ನೈಜತೆಯಿಂದ ಯೋಚಿಸುತ್ತಿದ್ದಾರೆ. ವಿಚ್ಛೇದಿತ ಈ ಮಹಿಳೆಯರು ಸ್ತ್ರೀ-ಪುರುಷ ಸ್ಥಾನಮಾನವನ್ನು ಭಿನ್ನವಾಗಿ ಗ್ರಹಿಸುತ್ತಿದ್ದು, ಸಮಾಜ ಸ್ತ್ರೀ-ಪುರುಷರಿಗೆ ಸಮಾಜ ಅವಕಾಶಗಳು ಬೇಕೆಂದು ಒತ್ತಾಯಿಸುತ್ತಿದ್ದಾರೆ.

ಈ ಪ್ರಕ್ರಿಯೆಯಿಂದ ಮಹಿಳೆಯರು ವಿವಾಹ ಸಂಸ್ಥೆಯಲ್ಲಿ ಬದಲಾವಣೆಯನ್ನು ತರುವ ಮೂಲಕ ಆಧುನಿಕ ಸಮಾಜಕ್ಕೆ ಹೊಂದಿಕೊಳ್ಳುವ ಆಧುನಿಕ ಮೌಲ್ಯಗಳನ್ನು ಅಳವಡಿಸಿಕೊಂಡು ಪಿತೃಪ್ರಧಾನ ಮೌಲ್ಯಗಳನ್ನು ನಿರಸನಗೊಳಿಸುತ್ತಿದ್ದಾರೆ. ಜೊತೆಗೆ ವಿವಾಹ ಗಂಡನಿಂದ ಬಿಡುಗಡೆಗೊಂಡ ಮಹಿಳೆಯರು ವಿಶಿಷ್ಟ ಸವಾಲುಗಳನ್ನು ಎದುರಿಸುತ್ತಾ ಅವರ ಬುದ್ಧಿ ಮನಸ್ಸುಗಳಿಂದ ತಮ್ಮ ಅಸ್ತಿತ್ವವನ್ನು ಗ್ರಹಿಸಿಕೊಳ್ಳುತ್ತಿದ್ದಾರೆ. ಅವರ ಬದುಕಿನ ಬಗೆಗಿನ ಈ ನಿಲುವುಗಳು ಮಹಿಳಾ ಸಮುದಾಯ ಪುರುಷನಿಷ್ಠ ಮೌಲ್ಯಗಳ ಬಗೆಗೆ ಪ್ರಜ್ಞೆಗೊಂಡಿರುವುದನ್ನು ಸೂಚಿಸುತ್ತದೆ.

ಒಟ್ಟಿನಲ್ಲಿ ವಿಚ್ಛೇದನೆಯು ಮಹಿಳೆ ಅಸ್ತಿತ್ವ ರಕ್ಷಣೆಯ ಸಾಧನವಾಗಿದೆ ಎಂಬದಂಥು ಸ್ಪಷ್ಟ. ಹಾಗೆಯೇ ವಿಚ್ಛೇದನೆ ಪಡೆದಿರುವ ಕೆಲವು ಮಹಿಳೆಯರು ಗಂಡನೆಂಬ ವ್ಯಕ್ತಿಯಿಂದ ತಮ್ಮ ವ್ಯಕ್ತಿತ್ವ ಮತ್ತು ಅಸ್ತಿತ್ವಕ್ಕೆ ಕುಂದುಂಟಾಗುತ್ತದೆ ಎಂದಾಗ ವಿವಾಹ ಸಂಸ್ಥೆ ಬದಲು, ಗಂಡನೆಂಬ ವ್ಯಕ್ತಿಯಿಂದ ಬಿಡುಗಡೆಗೊಳ್ಳಲು ಬಯಸಿದರೆ; ಮತ್ತೆ ಕೆಲವರು ವಿವಾಹ ಸಂಸ್ಥೆ ಮತ್ತು ಆ ಸಂಸ್ಥೆ ಸೃಷ್ಟಿಸುವ ಗಂಡ ಎನ್ನುವ ಪಾತ್ರದಿಂದ ಬಿಡುಗಡೆ ಬಯಸುತ್ತಾರೆ. ಈ ಮಹಿಳೆಯರು ಆ ಸಂಸ್ಥೆ ಮತ್ತು ಅದನ್ನು ಗಟ್ಟಿಗೊಳಿಸುವ ಕುಟುಂಬದ ಚೌಕಟ್ಟನ್ನು ನಿರಾಕರಿಸಿ, ಹೊರಬಂದು ತಮ್ಮ ವ್ಯಕ್ತಿತ್ವ ರೂಪಿಸಿಕೊಳ್ಳುತ್ತಿದ್ದಾರೆ.

ಇದನ್ನು ಗಮನಿಸಿದಾಗ ವಿಚ್ಛೇದನೆ ಬಹಳ ಸಂಕೀರ್ಣವಾಗಿದೆ. ಇಂತಹ ಸಂಕೀರ್ಣತೆ ಒಳಗೆ ವಿಚ್ಛೇದನೆ ಪಡೆಯುವ ಮಹಿಳೆಯರ ಆಶಯಗಳು ಅವರಿಗೆ ಅವರದೇ ಆದ ಶಕ್ತಿ ಸಾಮರ್ಥ್ಯವನ್ನು ತಂದುಕೊಟ್ಟಿವೆ. ಅಷ್ಟೇ ಅಲ್ಲ, ಅವುಗಳು ಸಮಾಜದಲ್ಲಿ ಸ್ವಾತಂತ್ರವನ್ನು ಜಾರಿಗೊಳಿಸುವ ಆಯ್ಕೆ ಮತ್ತು ಅವಕಾಶಗಳು, ನೀತಿ-ನಿಯಮಗಳು, ಸ್ತ್ರೀ-ಪುರುಷರಿಗೆ ಸಮನಾಗಿರಬೇಕೆಂದು ಒತ್ತಾಯಿಸುತ್ತಿವೆ.

• • •

## ಅಧ್ಯಾಯ ೫

# ಕಾನೂನಿನ ವ್ಯಾಪ್ತಿಯಲ್ಲಿ ವಿಚ್ಛೇದನೆ

ವಿಚ್ಛೇದನೆ ಕಾನೂನು ವೈಯಕ್ತಿಕ ಕಾನೂನುಗಳ ಅಡಿಯಲ್ಲಿ ಬರುವುದರಿಂದ ಆಯಾ ಧರ್ಮದ ವೈಯಕ್ತಿಕ ಕಾನೂನುಗಳು ವಿಚ್ಛೇದನೆಗೆ ಅನ್ವಯಿಸುತ್ತದೆ. ಬೌದ್ಧರು, ಸಿಖ್ಖರ್, ಜೈನರು ಸೇರಿದಂತೆ ಹಿಂದೂಗಳಿಗೆ "ಹಿಂದೂ ವಿವಾಹ ಅಧಿನಿಯಮ-೧೯೫೫" ಅನ್ವಯಿಸುತ್ತದೆ. ಕ್ರಿಶ್ಚಿಯನ್ನರಿಗೆ "ಭಾರತೀಯ ವಿಚ್ಛೇದನಾ ಅಧಿನಿಯಮ-೧೮೬೯" ಅನ್ವಯಿಸುತ್ತದೆ. ಪಾರ್ಸಿಗಳಿಗೆ "ಪಾರ್ಸಿ ವಿವಾಹ ಮತ್ತು ವಿಚ್ಛೇದನಾ ಅಧಿನಿಯಮ-೧೯೩೬" ಅನ್ವಯಿಸಿದರೆ, ಮುಸಲ್ಮಾನರಿಗೆ "ಮುಸ್ಲಿಂ ವಿವಾಹ ಅಧಿನಿಯಮ-೧೯೩೯" ಅನ್ವಯಿಸುತ್ತದೆ ಮತ್ತು "ಅಂತರ್‌ಧರ್ಮೀಯ ವಿವಾಹ ವಿಚ್ಛೇದನೆಗಳಿಗೆ ವಿಶೇಷ ವಿವಾಹ ಅಧಿನಿಯಮ-೧೯೫೪" ಅನ್ವಯಿಸುತ್ತದೆ.

ಸ್ವಾತಂತ್ರ್ಯದ ನಂತರ ವಿವಾಹಕ್ಕೆ ಸಂಬಂಧಿಸಿದಂತೆ ಆಧುನಿಕ ಪರಿಸ್ಥಿತಿಗೆ ಸೂಕ್ತವಾದಂತಹ ಕಾನೂನನ್ನು ಭಾರತ ಸರಕಾರವು ರೂಪಿಸಿತು. ಮುಸ್ಲಿಂ, ಕ್ರೈಸ್ತ, ಪಾರ್ಸಿ ಅಥವಾ ಯಹೂದಿ ಧರ್ಮದವರನ್ನು ಹೊರತುಪಡಿಸಿ, ಇತರ ಎಲ್ಲಾ ಭಾರತೀಯರಿಗೆ ಅನ್ವಯವಾಗುವಂತಹ ವಿವಾಹದ ಕಾನೂನನ್ನು ರೂಪಿಸುವ ಮೂಲಕ, ಸಂಪ್ರದಾಯದ ನಿಯಮಗಳನ್ನು ತಿರಸ್ಕರಿಸಿ, ವಿವಾಹ ಬಾಂಧವ್ಯಕ್ಕೆ ಕಾನೂನಿನ ಸ್ವರೂಪವನ್ನು ಕೊಟ್ಟಂತಾಯಿತು. "ಹಿಂದೂ ವಿವಾಹ ಅಧಿನಿಯಮ" ೧೯೫೫ ಎಂದು ಕರೆಯಲಾಗುವ, ವಿವಾಹದ ಈ ಕಾನೂನು ಮೇಲೆ ಸೂಚಿಸಿದ ಧರ್ಮೀಯರನ್ನು ಹೊರತುಪಡಿಸಿ ಇತರ ಎಲ್ಲ ಭಾರತೀಯರಿಗೂ ಅನ್ವಯ ವಾಗುತ್ತದೆ.

ಸಂವಿಧಾನದ ಮೂಲ ಉದ್ದೇಶಕ್ಕನುಗುಣವಾಗಿ ಮಹಿಳಾ ವಿಮೋಚನೆ ಮತ್ತು ಲಿಂಗ ಅಸಮಾನತೆ ಯನ್ನು ಸಾಧಿಸುವ ದೃಷ್ಟಿಯಿಂದ, ಮಹಿಳೆಯರಿಗೆ ಸಂಬಂಧಿಸಿದ ಎಲ್ಲ ಕಾನೂನು ಅಡಚಣೆಗಳನ್ನು ನಿವಾರಿಸುವುದು ಸ್ವತಂತ್ರ ಭಾರತವು ಕೈಗೊಂಡ ಮೊದಲ ಕ್ರಮವಾಯಿತು. ವೈವಾಹಿಕ ಜೀವನದಲ್ಲಿ ಮಹಿಳೆಗೆಯರಿಗೆ ತೋರಲಾಗುತ್ತಿದ್ದ ತಾರತಮ್ಯವನ್ನು ಪ್ರಜ್ಞಾವಂತ ಭಾರತೀಯರು ಗಮನಿಸಿದ್ದರು. ಅಂತೆಯೇ ೧೯೪೧ರಲ್ಲಿಯೇ ಹಿಂದೂ ವಿವಾಹ ಕಾನೂನುಗಳನ್ನು ಉದಾರಗೊಳಿಸುವ ದೃಷ್ಟಿಯಿಂದ ಮಾಹಿತಿಯನ್ನು ಸಂಗ್ರಹಿಸಲು ಸರ್ ಬೆನಗಲ್ ನರಸಿಂಗರಾವ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು

ನೇಮಿಸಲಾಯಿತು. ಆದರೆ ಆಗಿನ ಬ್ರಿಟೀಷರ ಅಧೀನದ ಭಾರತದಲ್ಲಿ ಇದ್ದಂತಹ ಯುದ್ಧ ಮತ್ತು ಅನಿಶ್ಚಿತ ಪರಿಸ್ಥಿತಿಯಿಂದಾಗಿ ಈ ಸಮಿತಿಯು ಸಲಹೆಗಳನ್ನು ಅನುಷ್ಠಾನಕ್ಕೆ ತರುವ ಯಾವುದೇ ಪರಿಣಾಮಕಾರಿ ಕ್ರಮಗಳನ್ನು ಬ್ರಿಟೀಷರ ಅವಧಿಯಲ್ಲಿ ಕೈಗೊಳ್ಳಲಾಗಲಿಲ್ಲ.

ಸ್ವಾತಂತ್ರ್ಯನಂತರ, ರಾಷ್ಟ್ರದ ಪ್ರಮುಖ ರಾಜಕೀಯ ಸಮಸ್ಯೆಗಳನ್ನೆಲ್ಲ ಬಗೆಹರಿಸಿದ ನಂತರ ರಾವ್ ಸಮಿತಿಯ ಸಲಹೆಗಳು ಸರಕಾರದ ಮುಂದೆ ಚರ್ಚೆಗೆ ಬಂದುವು. ಹಿಂದೂ ಮಹಿಳೆಯ ಎಲ್ಲ ಕೊರತೆಗಳನ್ನು ಪರಿಶೀಲಿಸಿದ ನಂತರ, ವೈವಾಹಿಕ ಜೀವನ ಮತ್ತು ಉತ್ತರಾಧಿಕಾರದ ವಿಷಯಗಳಲ್ಲಿ ಸಮಾನತೆಯನ್ನು ಸಾಧಿಸುವ ದೃಷ್ಟಿಯಿಂದ, ಲಿಖಿತ ಮತ್ತು ಪರಂಪರಾಗತ ಎಲ್ಲ ಹಿಂದೂ ಕಾನೂನುಗಳನ್ನೂ ಕ್ರೋಢೀಕರಿಸ ಬೇಕಾದ ಅವಶ್ಯಕತೆ ಇದೆ ಎಂದು ಸಮಿತಿಯು ಸಲಹೆ ಮಾಡಿತ್ತು. ಈ ಸಲಹೆಯ ಆಧಾರದ ಮೇಲೆ ೧೯೪೭ರಲ್ಲಿ ಹಿಂದೂ ಕೋಡ್‌ನ ಕರಡು ಪ್ರತಿಯನ್ನು ಸಿದ್ಧಗೊಳಿಸಲಾಯಿತು. ತಾತ್ಕಾಲಿಕ ಪಾರ್ಲಿಮೆಂಟ್‌ನ ಸೆಲೆಕ್ಟ್ ಕಮಿಟಿಯು ಇದನ್ನು ಪರಿಶೀಲಿಸಿತು. ನಿರೀಕ್ಷಿಸಿದಂತೆ ಸಂಪ್ರದಾಯಸ್ಥರಿಂದ ಇದಕ್ಕೆ ವಿರೋಧವೂ ವ್ಯಕ್ತವಾಯಿತು. ಆಗ ಇದ್ದ ಪಾರ್ಲಿಮೆಂಟ್ ವಯಸ್ಕ ಮತದಾನದ ಆಧಾರದ ಮೇಲೆ ಅಸ್ತಿತ್ವಕ್ಕೆ ಬಂದ ಸಂಸತ್ ಆಗಿರಲಿಲ್ಲ. ಅಂತೆಯೇ ಭಾರತದ ಹೊಸ ಸಂವಿಧಾನದ ಪ್ರಕಾರ ಚುನಾವಣೆ ನಡೆದು ಅಧಿಕಾರಕ್ಕೆ ಬರುವ ಸಂಸತ್ತು, ಈ ಕೋಡ್‌ನ್ನು ಪರಿಶೀಲಿಸಲಿ ಎಂದು ತೀರ್ಮಾನಿಸಲಾಯಿತು.

೧೯೫೨ರಲ್ಲಿ ನಡೆದ ಚುನಾವಣೆಯ ನಂತರ ಅಸ್ತಿತ್ವಕ್ಕೆ ಬಂದ ಸಂಸತ್ತು ಹಿಂದೂ ಕೋಡ್‌ನ್ನು ಪರಿಶೀಲಿಸಲು ಅತ್ಯಂತ ಅರ್ಹ ಸಂಸತ್ತು ಎನಿಸಿದುದರಿಂದ ಅನೇಕ ಮಸೂದೆಗಳು ಚರ್ಚೆಗೆ ಬಂದವು. ಅವುಗಳಲ್ಲಿ "ಹಿಂದೂ ವಿವಾಹ ಕಾಯಿದೆ" ೧೯೫೫, ಅತ್ಯಂತ ಪ್ರಮುಖ ಹಾಗೂ ಕ್ರಾಂತಿಕಾರಿಯಾದುದು. ಅಲ್ಲಿಯವರೆಗೆ ಹಿಂದೂಗಳಲ್ಲಿನ ಎಲ್ಲ ಜಾತಿ ಮತ್ತು ಉಪಜಾತಿಗಳು ವಿವಾಹಕ್ಕೆ ಸಂಬಂಧಿಸಿದಂತೆ ತಮ್ಮದೇ ಆದ ಪರಂಪರಾಗತ ಪದ್ಧತಿಗಳನ್ನು ಅನುಸರಿಸಿಕೊಂಡು ಬರುತ್ತಿದ್ದವು. ಎಲ್ಲ ಜಾತಿಗಳಿಗೂ ಏಕರೀತಿಯ ನಿಯಮಗಳನ್ನು ಜಾರಿಗೆ ತರಬೇಕಾದ ಅವಶ್ಯಕತೆ ಅಥವಾ ಸಾಧ್ಯತೆಗಳನ್ನು ಗಮನಿಸಿರಲಿಲ್ಲ. ಆದರೆ ಹಿಂದೂಗಳ ಇತಿಹಾಸದಲ್ಲಿಯೇ ಮೊದಲ ಬಾರಿಗೆ, ಸಂಪ್ರದಾಯದ ನಿಯಮಗಳನ್ನು ತಿರಸ್ಕರಿಸಿ, ಎಲ್ಲ ಹಿಂದೂಗಳಿಗೂ ಏಕರೀತಿಯ ಕಾನೂನುಗಳನ್ನು "ಹಿಂದೂ ವಿವಾಹ ಕಾಯಿದೆ" ೧೯೫೫ನ್ನು ಅಂಗೀಕರಿಸುವ ಮೂಲಕ ಜಾರಿಗೆ ತರಲಾಯಿತು. ಈ ಮಸೂದೆಯ ಉದ್ದೇಶಕ್ಕೋಸ್ಕರ ಹಿಂದೂ ಪದಕ್ಕೆ ಕಾನೂನಿನ ರೀತ್ಯ ವ್ಯಾಖ್ಯೆಯನ್ನು ಕೊಡಲಾಯಿತು. ಈ ಅಧಿನಿಯಮವನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳುವ ದೃಷ್ಟಿಯಿಂದ ಇದನ್ನು ವಿವರವಾಗಿ ಪರಿಶೀಲಿಸಬಹುದು.

ಈ ಅಧಿನಿಯಮದ ಪ್ರಕಾರ, ಹಿಂದೂ ಪದವು, "ವೀರಶೈವ, ಲಿಂಗಾಯಿತ ಅಥವಾ ಬ್ರಹ್ಮ, ಪ್ರಾರ್ಥನಾ ಅಥವಾ ಆರ್ಯ ಸಮಾಜದ ಅನುಯಾಯಿಯನ್ನು ಒಳಗೊಂಡ ಯಾವುದೇ ರೂಪ ಅಥವಾ ವಿಕಸನಗಳಿಂದ ಕೂಡಿರುವ ಹಿಂದೂ ಧರ್ಮದ ಯಾವನೇ ವ್ಯಕ್ತಿಗೆ" ಹಾಗೂ "ಬೌದ್ಧ, ಜೈನ ಅಥವಾ ಸಿಖ್ ಧರ್ಮದ ಯಾವನೇ ವ್ಯಕ್ತಿಗೆ" ಅನ್ವಯವಾಗುತ್ತದೆ. ಇದನ್ನು ಇನ್ನೂ ಸ್ಪಷ್ಟಪಡಿಸುವ ದೃಷ್ಟಿಯಿಂದ

ಈ ಅಧಿನಿಯಮವು ಮುಂದುವರೆದು, "ಹಿಂದೂ ವಿಧಿಗೆ ಅಥವಾ ಅಂತಹ ವಿಧಿಯ ಭಾಗವಾಗಿರುವ ಯಾವುದೇ ರೂಢಿಗೆ ಅಥವಾ ಆಚರಣೆಗೆ ಅವರು ಒಳಪಡುತ್ತಿದ್ದಿಲ್ಲವೆಂದು ರುಜುವಾತುಪಡಿಸಿದ ಹೊರತು, ಮುಸ್ಲಿಂ, ಕ್ರೈಸ್ತ, ಪಾರ್ಸಿ ಅಥವಾ ಯಹೂದಿಗಳನ್ನು ಧರ್ಮದವನಲ್ಲದ ಯಾವನೇ ಇತರ ವ್ಯಕ್ತಿಗೆ" ಹಿಂದೂ ಪದವು ಅನ್ವಯವಾಗುತ್ತದೆ ಎಂದು ತಿಳಿಸುತ್ತದೆ. ಮುಸ್ಲಿಂ, ಕ್ರೈಸ್ತ ಮತ್ತು ಪಾರ್ಸಿ ಧರ್ಮಗಳು ತಮ್ಮದೇ ಆದ ಪ್ರತ್ಯೇಕ ವಿವಾಹ ಕಾನೂನುಗಳನ್ನು ಹೊಂದಿರುತ್ತವೆ. ಅಂತೆಯೇ, ಪ್ರಸ್ತುತ ಅಧಿನಿಯಮವು ಉಳಿದ ಇತರ ಎಲ್ಲ ಭಾರತೀಯರಿಗೆ ಅನ್ವಯವಾಗುತ್ತದೆ.

ಹಿಂದೂ ವಿವಾಹ ಅಧಿನಿಯಮ, ೧೯೫೫ರ ಅಧಿನಿಯಮವು ವಿವಾಹಿತ ಪತಿ-ಪತ್ನಿಯರು ವಿವಾಹ ಬಂಧನದಿಂದ ಹೊರಬರಲು ಅವಕಾಶ ಕಲ್ಪಿಸಿತು. ಇದು ವಿವಾಹ ವಿಚ್ಛೇದನಕ್ಕೆ ಅನುಮತಿಯನ್ನು ನೀಡಿತು. ಈಗಾಗಲೇ ತಿಳಿದಿರುವಂತೆ ಈ ಅಧಿನಿಯಮವು ಹಿಂದೂ ಧರ್ಮವಲ್ಲದೆ ಇತರೇ ಬೌದ್ಧ, ಸಿಖ್, ಜೈನ್ ಧರ್ಮದವರಿಗೂ ಅನ್ವಯವಾಗುವುದರಿಂದ, ಈ ಧರ್ಮಗಳನ್ನು ಹೊರತುಪಡಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

"ಹಿಂದೂ ವಿವಾಹ ಅಧಿನಿಯಮ" ೧೯೫೫ ಮೂವತ್ತು ವಿಧಿಗಳನ್ನು ಒಳಗೊಂಡಿದ್ದು, ಈ ವಿಧಿಗಳಲ್ಲಿ ವಿವಾಹ ಪ್ರಾರಂಭದಿಂದ ನಡೆಯುವ ಸಂಗತಿಗಳಿಂದ ಹಿಡಿದು ವಿವಾಹಕ್ಕೆ ಅರ್ಹರು ಯಾರು, ಅನರ್ಹರು ಯಾರೂ, ವಿವಾಹ ವಿಚ್ಛೇದನೆ, ಪುನರ್‌ವಿವಾಹ, ಜೀವನಾಂಶ ಒಳಗೊಂಡಂತೆ ಹಲವು ಅಂಶ ಗಳನ್ನು ತಿಳಿಸುವಂತದ್ದಾಗಿದೆ. ಈ ಕಾಯಿದೆಯು ೧೩, ೧೪, ೨೪, ೨೫ ಮತ್ತು ೨೬ನೇ ವಿಧಿಗಳು ವಿವಾಹ ವಿಚ್ಛೇದನಕ್ಕೆ ಕಾರಣಗಳು, ವಿವಾಹ ಮತ್ತು ವಿಚ್ಛೇದನೆಯ ಅಂತರ, ವಿಚಾರಣ ಕಾಲದ ಜೀವನಾಂಶ, ಶಾಶ್ವತ ಜೀವನಾಂಶ ಹಾಗೂ ಸಂತಾನ ಸಂರಕ್ಷಣೆಗೆ ಸಂಬಂಧಿಸಿದಂತೆ ತಿಳಿಸುತ್ತವೆ.

೧೯೫೫ರಲ್ಲಿ ಜಾರಿಗೆ ಬಂದ ಹಿಂದೂ ವಿವಾಹ ಶಾಸನವು ಕಾಲ ಪರಿಸ್ಥಿತಿಗೆ ಅನುಗುಣವಾಗಿ ಬದಲಾವಣೆಯಾಗುತ್ತಲೇ ಬರುತ್ತಿದೆ. ಹಾಗೆ ಕೆಲವು ಹೊಸ ಅಂಶಗಳನ್ನು ಸೇರ್ಪಡೆ ಮಾಡಿಕೊಂಡಿದೆ. ಇವುಗಳಿಗೆ ಉದಾಹರಣೆಯಾಗಿ ಹೇಳುವುದಾದರೆ ೧೯೫೫ರ ಕಾಯಿದೆಯ ಪ್ರಕಾರ ವಿವಾಹವಾಗುವ ಹುಡುಗ-ಹುಡುಗಿಯ ವಯಸ್ಸನ್ನು ೧೮ ಹಾಗೂ ೧೫ ವರ್ಷ ಎಂದು ನಿಗದಿ ಮಾಡಲಾಗಿತ್ತು. ಆದರೆ ೧೯೭೬ರಲ್ಲಿ ಇದು ತಿದ್ದುಪಡಿ ಹೊಂದಿ ಹುಡುಗನಿಗೆ ೨೧ ವರ್ಷ, ಹುಡುಗಿಗೆ ೧೮ ವರ್ಷ ಎಂದು ನಿಗದಿಪಡಿಸಲಾಗಿದೆ. ಹಾಗೆ ವಿವಾಹ ಮತ್ತು ವಿಚ್ಛೇದನೆಯ ಅಂತರ ಮೊದಲು ೩ ವರ್ಷ ನಿಗದಿಯಾಗಿತ್ತು. ಆದರೆ ೧೯೭೬ರಲ್ಲಿ ತಿದ್ದುಪಡಿಯಾಗಿ ಒಂದು ವರ್ಷ ಅವಧಿ ನಿಗದಿಯಾಗಿದೆ. ಇನ್ನೂ ಹೊಸದಾಗಿ ಸೇರಿಸಲ್ಪಟ್ಟ ಅಂಶವೆಂದರೆ ೧೯೭೬ರ ನಂತರ ವಿವಾಹವಾದ ಪತಿ-ಪತ್ನಿಯರಿಬ್ಬರೂ ನಮಗೆ ಕೂಡಿ ಬಾಳಲು ಆಗುತ್ತಿಲ್ಲದ ಸಂದರ್ಭದಲ್ಲಿ ಪರಸ್ಪರ ಒಪ್ಪಿಗೆಯ ಮೇರೆಗೆ ವಿಚ್ಛೇದನೆಯನ್ನು ಪಡೆಯುವ ಅವಕಾಶವನ್ನು ಕಲ್ಪಿಸಿತು. ಹೀಗೆ ಈ ಕಾಯಿದೆಯು ಕಾಲ ಪರಿಸ್ಥಿತಿಗೆ ಅನುಗುಣವಾಗಿ ಬದಲಾಗಿದೆ.

ಹಿಂದೂ ವಿವಾಹ ಶಾಸನ ಬದಲಾವಣೆಯಾಗುವುದಕ್ಕೆ ಮಹಿಳಾ ಚಳುವಳಿಗಾರರ ಒತ್ತಡವು ಪ್ರಮುಖ ವಾಗಿದೆ. ಮಹಿಳಾ ಚಳುವಳಿಗಳು ಮಹಿಳಾ ಸ್ಥಿತಿಯನ್ನು ಉತ್ತಮಪಡಿಸುವ ನಿಟ್ಟಿನಲ್ಲಿ ಹೋರಾಡುತ್ತಿದ್ದು,

ಸಮಾಜದ ಎಲ್ಲ ವಲಯಗಳಲ್ಲಿ ಮಹಿಳಾ ಸ್ಥಿತಿಯನ್ನು ಉತ್ತಮಪಡಿಸುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತವೆ. ವಿಚ್ಛೇದನಕ್ಕೆ ಸಂಬಂಧಿಸಿದಂತೆ ಮಹಿಳಾ ಚಳುವಳಿಗಳು ಪ್ರಮುಖವಾಗಿ ಷಾಬಾನು ಪ್ರಕರಣವನ್ನು ಪ್ರಮುಖವಾಗಿ ಗುರುತಿಸಿದವೆಂದರೆ ತಪ್ಪಾಗಲಾರದು. ಆದರೆ ದುರಾದೃಷ್ಟವಶಾತ್ ಇಡೀ ಪ್ರಕರಣವನ್ನು ಪಿತೃಪ್ರಧಾನ ಸಮಾಜವು ಹಿಂದು-ಮುಸ್ಲಿಂ ಕೋಮು ಸಂಘರ್ಷದ ವಿಚಾರಕ್ಕಾಗಿ ಪುನರ್‌ವ್ಯಾಖ್ಯಾನಿಸಿ ತಣ್ಣಗಾಗಿಸಿದವು. ಹೀಗೆ ಹಲವು ಬಗೆಗಳಲ್ಲಿ ಮಹಿಳಾ ಚಳುವಳಿಗಳು ವಿಚ್ಛೇದನೆ ವಿಷಯದಲ್ಲಿ ಕಾರ್ಯಮಗ್ನವಾಗಿವೆ.

ಅಂತಾರಾಷ್ಟ್ರೀಯ ಮಹಿಳಾ ವರ್ಷದ ಹಿನ್ನೆಲೆಯಲ್ಲಿ ಬಂದಿರುವಂತ ೧೯೭೧ರ "ಸಮಾನತೆಯೆಡೆಗೆ ವರದಿ"ಯು ಮಹಿಳೆಯರ ಸ್ಥಿತಿ ತಿಳಿಯಿತಲ್ಲದೆ, ವಿವಿಧ ವಲಯಗಳಲ್ಲಿ ಮಹಿಳೆಯರ ಸ್ಥಿತಿ ಸುಧಾರಿಸುವುದಕ್ಕೆ ಕೆಲವು ನಿರ್ದಿಷ್ಟ ಸಲಹೆಗಳನ್ನು ನೀಡಿತು. ಅದರಲ್ಲಿ ಮಹಿಳೆ ಮತ್ತು ಕಾನೂನು ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸಲಹೆ ನೀಡಿತು. ಅದರಲ್ಲಿ ವಿಚ್ಛೇದನಕ್ಕೆ ಸಂಬಂಧಿಸಿದ ಕಾಯ್ದೆಯಲ್ಲಿ ಸುಧಾರಣೆ ಇತ್ಯಾದಿಗಳು ಸೇರಿಕೊಂಡಿದ್ದವು.

ಕಾಲ ಪರಿಸ್ಥಿತಿಗೆ ಅನುಗುಣವಾಗಿ ಬದಲಾಗಿರುವ ಹಿಂದೂ ವಿವಾಹ ಶಾಸನದ ೧೩, ೧೪, ೨೪, ೨೫ ಮತ್ತು ೨೬ನೇ ವಿಧಿಗಳನ್ನು ಈ ಕೆಳಗಿನಂತೆ ಒಂದೊಂದಾಗಿ ತಿಳಿಯುವ ಮೂಲಕ 'ವಿಚ್ಛೇದನೆ' ಪ್ರಕ್ರಿಯೆಯನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ. ಈ ಶಾಸನದ ೧೩ನೇ ವಿಧಿಯು ಯಾವ ಕಾರಣಗಳಿದ್ದರೆ ವಿಚ್ಛೇದನೆಗಾಗಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಬಹುದೆನ್ನುವುದಕ್ಕಾಗಿ ಕೆಲವು ಕಾರಣ ಗಳನ್ನು ಸೂಚಿಸಿದ್ದು, ಆ ಕಾರಣಗಳನ್ನು ಒಂದೊಂದಾಗಿ ಈ ಕೆಳಗೆ ವಿವರಿಸಲಾಗಿದೆ.

**ವ್ಯಭಿಚಾರ ಕಾರಣ**

ಈ ಶಾಸನವು ಜಾರಿಗೆ ಬಂದ ನಂತರ ಗಂಡ-ಹೆಂಡತಿಯರಲ್ಲಿ ಯಾರಾದರೊಬ್ಬರು ವ್ಯಭಿಚಾರಿಗಳಾಗಿ ಜೀವನ ನಡೆಸುತ್ತಿದ್ದರೆ ಆ ಕಾರಣದಿಂದ ವಿವಾಹ ವಿಚ್ಛೇದನ ಪಡೆಯಬಹುದು. ಅಂದರೆ ಯಾರಾದರೊಬ್ಬರು ಒಂದೆರಡು ಬಾರಿ ವ್ಯಭಿಚಾರ ನಡೆಸಿದ್ದರೆಂದು ಮಾತ್ರಕ್ಕೆ ಆ ಕಾರಣದ ಮೇಲೆ ವಿಚ್ಛೇದನೆ ಪಡೆಯುವಂತಿಲ್ಲ. ವ್ಯಭಿಚಾರ ವೃತ್ತಿಯು ನಿರಂತರವಾಗಿ ಮುಂದುವರಿಯುತ್ತಲೇ ಇರುವ ವ್ಯವಹಾರವಾಗಿದ್ದರೆ ಮಾತ್ರ ಈ ವಿಧಿಯನ್ವಯ ವಿಚ್ಛೇದನಕ್ಕೆ ಅರ್ಜಿ ಸಲ್ಲಿಸಬಹುದು. ವ್ಯಭಿಚಾರ ಜೀವನವೆಂದರೆ ಗಂಡ-ಹೆಂಡತಿಯರಲ್ಲಿ ಯಾರಾದರೊಬ್ಬರೂ ಅರ್ಜಿ ಸಲ್ಲಿಸುವ ಕಾಲದಲ್ಲಿ ಅನ್ಯರೊಡನೆ ವ್ಯಭಿಚಾರ ವೃತ್ತಿ ಸಂಬಂಧವನ್ನು ಇಟ್ಟುಕೊಂಡಿರುವುದಾಗಿ ಸಿದ್ಧಪಡಿಸಬೇಕು. ಈ ವಿಧಿಯನ್ನು ಸೂಕ್ಷ್ಮವಾಗಿ ವಿವೇಚಿಸಿದರೆ ಗಂಡನಾಗಲೀ, ಹೆಂಡತಿಯಾಗಲೀ ವಿವಾಹಕ್ಕೂ ಮುಂಚೆ ವ್ಯಭಿಚಾರಿಗಳಾಗಿದ್ದರೂ. ಸಹ ವಿವಾಹವಾದ ಮೇಲೆ ತಮ್ಮ ಜೀವನದಲ್ಲಿ ಮಾರ್ಪಾಡು ಮಾಡಿಕೊಂಡು ಸಹಜೀವಿಗಳಾಗಿ ಸದಾಚಾರ ವೃತ್ತಿಯಲ್ಲಿರುವರೆಂಬುದು ವಿಧಿತವಾದರೆ ಹಿಂದೆ ಒಮ್ಮೆ ವ್ಯಭಿಚಾರ ವೃತ್ತಿಯಲ್ಲಿದ್ದರೆಂಬುದನ್ನು ಮಾತ್ರ ಸಿದ್ಧಪಡಿಸಿದರೆ ವಿವಾಹ ವಿಚ್ಛೇದನದ ಆಜ್ಞೆ ಪಡೆಯಲು ಅವಕಾಶವಿಲ್ಲವೆಂಬುದು ವ್ಯಕ್ತವಾಗುತ್ತದೆ. ಒಮ್ಮೆ ನಡೆದ ವ್ಯಭಿಚಾರವು

ಆಕಸ್ಮಿಕವಾದ ಅನಿರೀಕ್ಷಿತವಾದ ಅಥವಾ ಸನ್ನಿವೇಶದಿಂದ ನೆರವೇರಿದ ಅಪರಾಧವಾಗಿದ್ದರೆ ಅದು ಈ ವಿಧಿಯಂತೆ ಪರಿಹಾರ ಪಡೆಯಲು ಕಾರಣವಾಗುವುದಿಲ್ಲ. ಹೆಣ್ಣಾಗಲಿ, ಗಂಡಾಗಲಿ ಬಲತ್ಕಾರಕ್ಕೋ ವಂಚನೆಗೋ ತುತ್ತಾಗಿ ಪರರೊಡನೆ ಸಂಭೋಗ ನಡೆಸಿದ್ದರೆ ಅದು ಶಾಸನರೀತ್ಯಾ ವ್ಯಭಿಚಾರವೆನಿಸುವುದಿಲ್ಲ. ಹಾಗೆ ಬಲತ್ಕಾರದಿಂದ, ವಂಚನೆಯಿಂದ ಒಂದೆರಡು ಬಾರಿ ನಡೆದ ದುರ್ಘಟನೆಯ ಆಧಾರದ ಮೇಲೆ ಈ ವಿಧಿಯನ್ನು ಅವಲಂಬಿಸಿ ಅರ್ಜಿ ಸಲ್ಲಿಸಿದರೆ ಅದು ಸಕಾರಣವೆಂದು ಒಪ್ಪಲು ಸಾಧ್ಯವಿಲ್ಲ. ದಂಪತಿಗಳಲ್ಲಿ ಯಾರಾದರೊಬ್ಬರೂ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸುವ ಸಮಯದವರೆಗೂ ವ್ಯಭಿಚಾರಿಗಳಾಗಿದ್ದರೆಂಬುದನ್ನು ಯಾವ ಅನುಮಾನಕ್ಕೆ ಅವಕಾಶವಿಲ್ಲದ ರೀತಿಯಲ್ಲಿ ಸ್ಥಿರಪಡಿಸಬೇಕು. ಅಂದರೆ ವ್ಯಭಿಚಾರಿಗಳಾಗಿದ್ದರೆಂಬುದು ಕೇವಲ ಅನುಮಾನವಾಗಿದ್ದರೆ, ಅದು ಪೂರ್ಣ ಪ್ರಮಾಣವಾಗಿರದಿದ್ದರೆ ಈ ವಿಧಿಯಂತೆ ಆಜ್ಞೆ ಪಡೆಯಲು ಅರ್ಜಿದಾರರಿಗೆ ಅವಕಾಶವಿರುವುದಿಲ್ಲ. ವ್ಯಭಿಚಾರವು ಕೇವಲ ಊಹೆಯಾಗಿರಬಾರದೆಂದು ನ್ಯಾಯಾಲಯವು ಅಭಿಪ್ರಾಯಪಟ್ಟಿದೆ. ವ್ಯಭಿಚಾರ ಪ್ರಕರಣವನ್ನು ನೇರವಾದ ಪ್ರಮಾಣಗಳಿಂದ ಸಾಧಿಸಲು ಸಾಧ್ಯವಿಲ್ಲವಾದುದರಿಂದಲೂ ಸನ್ನಿವೇಶಗಳನ್ನೆಲ್ಲಾ ಪರಿಗಣಿಸಿ ಒಂದು ನಿಶ್ಚಯಕ್ಕೆ ಬರಬೇಕಾಗಿರುವುದರಿಂದಲೂ ಸಹ ಈ ಅಭಿಪ್ರಾಯವನ್ನೇ ಎಲ್ಲ ನ್ಯಾಯಾಲಯಗಳೂ ಪ್ರತಿಪಾದಿಸಿವೆ. ವ್ಯಭಿಚಾರ ಕಾರಣದ ಮೇಲೆ ವಿವಾಹ ವಿಚ್ಛೇದನವನ್ನು ಬಯಸುವವರು ತಮಗೆ ಆ ಕಾರಣವು ತಿಳಿದ ಕೂಡಲೇ ಅಂದರೆ ಒಂದು ವರ್ಷದ ಅವಧಿಯಲ್ಲೇ ಅರ್ಜಿ ಸಲ್ಲಿಸಬೇಕೆಂದು ಹೇಳುತ್ತದೆ.

**ಮತಾಂತರ ಕಾರಣ**

ಈ ಶಾಸನರೀತ್ಯಾ ಹಿಂದೂ ಶಬ್ದಕ್ಕೆ ನೀಡಿರುವ ಅರ್ಥಕ್ಕೆ ವಿರೋಧವಾದ ವರ್ಗಕ್ಕೆ ಮತಾಂತರ ಹೊಂದಿದ್ದರೆ ಮಾತ್ರ ಶಾಸನರೀತ್ಯಾ ಮತಾಂತರವಾಗುತ್ತದೆ. ಜೈನರು, ಬೌದ್ಧರಾದರೂ, ಬೌದ್ಧರೂ ಪಾರ್ಸಿಗಳಾದರೂ ಮತಾಂತರವೆನಿಸುವುದಿಲ್ಲ. ಈ ಶಾಸನ ಅನ್ವಯವಾಗುವ ಸಮಾಜವನ್ನು ತ್ಯಜಿಸಿ ಮತ್ತೊಂದು ಶಾಸನಕ್ಕೆ ಒಳಪಡುವ ಸಮಾಜಕ್ಕೆ ಸೇರಿಕೊಂಡು ಆ ಸಮಾಜದ ಸಂಸಾರಕ್ಕೆ ಗಂಡನಾಗಲೀ ಹೆಂಡತಿಯಾಗಲೀ ಒಳಪಟ್ಟರೆ ಅವರು ಮತಾಂತರ ಹೊಂದಿದರೆಂಬ ಅರ್ಥಕ್ಕೆ ಒಳಗಾಗುತ್ತಾರೆ. ಹೀಗೆ ಗಂಡನು ಮತಾಂತರ ಹೊಂದಿದರೆ ಹೆಂಡತಿಯು ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿ ವಿವಾಹ ವಿಚ್ಛೇದನೆ ಪಡೆಯಬಹುದು. ಅಂತೆಯೇ ಹೆಂಡತಿ ಮತಾಂತರ ಹೊಂದಿದರೆ ಗಂಡನು ವಿಚ್ಛೇದನೆ ಪಡೆಯಬಹುದು. ಗಂಡ-ಹೆಂಡತಿ ಇಬ್ಬರೂ ಮತಾಂತರ ಹೊಂದಿ ಒಂದೇ ಮತಕ್ಕೆ ಸೇರಿದ್ದರೆ ಯಾವ ಮತಕ್ಕೆ ಸೇರುವರೋ ಆ ಶಾಸನದ ನಿಯಮಗಳಿಗೆ ಅವರು ಬದ್ಧರಾಗಿರುತ್ತಾರೆಯೇ ವಿನಃ ಈ ಶಾಸನದ ಆದೇಶದಂತೆ ಅವರು ಯಾವ ಪರಿಹಾರವನ್ನು ಹೊಂದುವಂತಿಲ್ಲ. ಈ ಶಾಸನವು ಹಿಂದೂಗಳ ಅಂತರ್‌ಜಾತೀಯ ವಿವಾಹವನ್ನು ವಿರೋಧಿಸುವುದಿಲ್ಲ.

**ಬುದ್ಧಿವಿಕಲ್ಪ ಕಾರಣ**

ಹಿಂದೂ ವಿವಾಹ ಕಾಯ್ದೆಯ ಹತ್ತನೆಯ ವಿಧಿಯಂತೆ ದಂಪತಿಗಳಲ್ಲಿ ಯಾರಾದರೊಬ್ಬರೂ ಅರ್ಜಿ ಸಲ್ಲಿಸುವುದಕ್ಕೆ ಮುನ್ನ ಎರಡು ವರ್ಷಗಳಿಂದಲೂ ನಿರಂತರವಾಗಿ ಬುದ್ಧಿವಿಕಲ್ಪ ಹೊಂದಿದ್ದರೆ ಪರಿತ್ಯಾಗ

ನಿರ್ದೇಶನವನ್ನು ಪಡೆಯಬಹುದೆಂದು ಹೇಳಿದೆ. ಬುದ್ಧಿವಿಕಲ್ಪ ವ್ಯಾಧಿಯೂ ವಿವಾಹ ಕಾಲದಲ್ಲೇ ಇತ್ತೆಂದೂ ಸ್ಥಿರವಾದಲ್ಲಿ ಈ ಶಾಸನದ ಹನ್ನೆರಡನೆಯ ವಿಧಿಯಂತೆ ವಿವಾಹವು ನಿಷೇಧವೆನಿಸುತ್ತದೆ. ಎರಡು ವರ್ಷ ಕಾಲ ನಿರಂತರವಾಗಿದ್ದರೆ ಅಂದರೆ ವಿವಾಹದ ನಂತರ ಈ ವ್ಯಾಧಿ ಒಂದೆರಡು ವರ್ಷಗಳವರೆಗೂ ಮುಂದುವರಿದರೆ ನ್ಯಾಯಬದ್ಧ ಪ್ರತ್ಯೇಕತೆಗೆ ಅವಕಾಶ ದೊರೆಯುತ್ತದೆ. ಅದು ವಾಸಿ ಮಾಡಲು ಅಸಾಧ್ಯ ವಾಗಿದ್ದು ಮೂರು ವರ್ಷ ಕಾಲಕ್ಕೂ ಮೀರಿದ್ದರೆ ವಿವಾಹ ವಿಚ್ಛೇದನವನ್ನೇ ಪಡೆಯಬಹುದೆಂದು ಹದಿಮೂರನೆಯ ವಿಧಿಯಲ್ಲಿ ಸೂಚಿತವಾಗಿದೆ.

ಈ ಅಂಶವನ್ನು ಸ್ಥಿರಪಡಿಸುವಾಗ ವೈದ್ಯರ ಅಭಿಪ್ರಾಯಕ್ಕೆ ಮನ್ನಣೆ ನೀಡಲಾಗುತ್ತದೆ. ಅವರ ಪ್ರಯತ್ನವು ವಿಫಲವಾದಾಗ ವಾಸಿಯಾಗದ ವ್ಯಾಧಿಯೆಂದು ತೀರ್ಮಾನಿಸಲಾಗುತ್ತದೆ. ವೈದ್ಯರಲ್ಲಿ ಭಿನ್ನಾಭಿಪ್ರಾಯವು ತಾತ್ವಿಕವಾಗಿ ತೋರಿಬಂದರೂ ಪ್ರಾಯೋಗಿಕ ವಿವರಣೆಯಿಂದ ಸತ್ಯಾಂಶವನ್ನು ರೂಪಿಸಬೇಕಾಗುತ್ತದೆ. ವಿವಾಹ ವಿಚ್ಛೇದನವು ಬಹುಕಾಲದ ಸಂಪ್ರದಾಯವನ್ನು ಕಿತ್ತೊಗೆಯುತ್ತದೆ. ಆದುದರಿಂದ ಊಹಾತ್ಮಕ ಕಾರಣಗಳನ್ನು ನ್ಯಾಯಾಲಯವು ಒಪ್ಪುವುದಿಲ್ಲ. ಬುದ್ಧಿವಿಕಲ್ಪವನ್ನು ವೈದ್ಯರು ಸೂಚಿಸಬಹುದು. ಆದಾಗ್ಯೂ ದಂಪತಿಗಳಲ್ಲಿ ಪ್ರತಿವಾದಿಯೂ ವಾಸಿಯಾಗದಂತಹ ಬುದ್ಧಿವಿಕಲ್ಪ ವ್ಯಾಧಿಯಿಂದ ಮೂರು ವರ್ಷಗಳ ಕಾಲದಿಂದಲೂ ನರಳುತ್ತಿರುವರೆಂಬುದನ್ನು ಸ್ಥಿರಪಡಿಸುವ ಹೊಣೆ ಅರ್ಜಿದಾರರಿಗೆ ಸೇರಿರುತ್ತದೆ. ನ್ಯಾಯಾಲಯದ ನೆರವಿನಿಂದ ಪ್ರತಿವಾದಿಯನ್ನು ವೈದ್ಯರ ಪರೀಕ್ಷೆಗೆ ಗುರಿಪಡಿಸಬಹುದು. ಆದರೆ ಪ್ರತಿವಾದಿಯೂ ವೈದ್ಯರ ಪರೀಕ್ಷೆಗೆ ಒಪ್ಪದಿದ್ದರೆ ಅದು ಅನುಮಾನಕ್ಕೆ ಕಾರಣವೇ ಹೊರತು ಅವರಿಗೆ ಬುದ್ಧಿವಿಕಲ್ಪವಿದೆಯೆಂದು ನ್ಯಾಯಾಲಯದಲ್ಲಿ ಸ್ಥಿರಪಡಿಸಿದಂತೆ ಒಪ್ಪಿ ತೀರ್ಪು ಕೊಡಲು ಸಾಧ್ಯವಿಲ್ಲ. ಪ್ರತಿವಾದಿಯು ನ್ಯಾಯಾಲಯದ ನೆರವಿನಿಂದಲೂ ವೈದ್ಯ ಪರೀಕ್ಷೆಗೆ ಒಳಗಾಗಿದ್ದರೂ ಸಹ ವಾದಿಯೂ ತನ್ನ ಯಾರನ್ನೂ ಇತರ ನಿದರ್ಶನಗಳ ಆಧಾರದಿಂದಲೇ ಸ್ಥಿರಪಡಿಸಬೇಕು. ಈ ಕಾರಣವನ್ನು ರೂಪಿಸುವಾಗಲೂ ಸಹ ವಿವಾಹವು ಪವಿತ್ರಬಂಧನವೆಂಬ ಅಂಶವನ್ನು ಗಮನಿಸಲಾಗಿದೆ. ಸಂಸಾರದಲ್ಲಿ ಬರಬಹುದಾದ ಕ್ಷಣಿಕ ಘಟನೆಗಳಿಗಾಗಿ ಈ ಬಂಧುತ್ವವನ್ನು ನಿರಂತರವಾಗಿ ಬೇರ್ಪಡಿ ಸುವುದನ್ನು ಹಿಂದೂ ಸಮಾಜವು ಒಪ್ಪುವುದಿಲ್ಲ. ಕಾರಣಾಂತರಗಳಿಂದ ಮಾನವರು ಕೆಲವು ರೋಗಗಳಿಗೆ ತುತ್ತಾಗಬಹುದು. ಅವು ವೈದ್ಯ ಚಿಕಿತ್ಸೆಯಿಂದ ಪರಿಹಾರವೂ ಆಗಬಹುದು. ದಂಪತಿಗಳಲ್ಲಿ ಸಮರಸ ಸುಖವಿರಬೇಕೆಂಬುದೇ ವಿವಾಹ ಸಂಸಾರದ ಮೂಲ ಉದ್ದೇಶ. ಇಂತಹ ವ್ಯಾಧಿಯಿಂದ ದಾಂಪತ್ಯ ಸುಖ, ಶಾಂತಿಗಳಿಗೆ ಆತಂಕವುಂಟಾದಲ್ಲಿ ಅದನ್ನೇ ಅವರು ಅನುಭವಿಸಬೇಕೆಂಬುದು ನ್ಯಾಯಸಮ್ಮತವಲ್ಲ. ಅಂತಹ ವ್ಯಾದಿಯಿದ್ದರೂ ದಂಪತಿಗಳಾಗಿಯೇ ಉಳಿಯಬೇಕೆಂಬುದು ಹೇಳುವುದು ಉಚಿತವಲ್ಲ. ಆದರೆ ವಿವಾಹ ವಿಚ್ಛೇದನವಾದಲ್ಲದೆ ಪುನ ದಾಂಪತ್ಯ ಸಮರಸವು ಅವರ ಜೀವನದಲ್ಲಿ ಏರ್ಪಡುವಂತಿಲ್ಲ. ಆದುದರಿಂದ ಈ ಕಾರಣದಿಂದಲೂ ದಾಂಪತ್ಯ ವಿಚ್ಛೇದನೆ ಪಡೆಯಲು ಈ ಶಾಸನದಲ್ಲಿ ಅವಕಾಶ ಕೊಡಲಾಗಿದೆ. ಆದರೆ ಈ ಕಾರಣದ ಮೇಲೆ ವಿಚ್ಛೇದನೆ ಪಡೆಯಬೇಕಿದ್ದರೆ ಯಾವ ರೀತಿಯ ಅನುಮಾನ ಊಹಾಪೋಹಗಳಿಗೆ

ಕಾರಣವಿಲ್ಲದಂತೆ ನ್ಯಾಯಾಲಯದಲ್ಲಿ ಸ್ಥಿರಪಡಿಸಬೇಕಾಗುತ್ತದೆ. ಅದನ್ನು ಸ್ಥಿರಪಡಿಸುವಾಗ ಮುಖ್ಯವಾಗಿ ಮೂರು ಅಂಶಗಳನ್ನು ಗಮನಿಸಬೇಕು.

- ಬುದ್ಧಿವಿಕಲ್ಪವಾಗಿದೆ.
- ಅದು ವಾಸಿ ಮಾಡಲು ಸಾಧ್ಯವಿಲ್ಲ. ಆ ವಿಷಯದಲ್ಲಿ ವೈದ್ಯಕೀಯ ಪ್ರಯತ್ನ ನಡೆದು ವಿಫಲವಾದ ನಿದರ್ಶನವಿರಬೇಕು.
- ಅಂತಹ ವ್ಯಾಧಿ ಮೂರು ವರ್ಷಗಳ ಅವಧಿಗಿಂತ ಹೆಚ್ಚಾಗಿರಬೇಕು.

ಈ ಅಂಶಗಳನ್ನು ಸ್ಪಷ್ಟವಾಗಿ ನಿರ್ದಿಷ್ಟವಾಗಿ ಸ್ಥಿರಪಡಿಸಿದರೆ ಮಾತ್ರ ವಿಚ್ಛೇದನದ ಆಜ್ಞೆಯನ್ನು ಪಡೆಯಬಹುದು. ಈ ವಿಷಯವನ್ನು ವೈದ್ಯಶಾಸ್ತ್ರದ ಆಧಾರದ ಮೇಲೆ ನಿರ್ಧರಿಸಬಹುದು. ವೈದ್ಯಶಾಸ್ತ್ರದ ಅಭಿಪ್ರಾಯವೇ ನಿರ್ದಿಷ್ಟವೆಂದು ನ್ಯಾಯಾಲಯವು ಒಪ್ಪುವುದಿಲ್ಲ. ನ್ಯಾಯಾಲಯವು ಇತರ ಸನ್ನಿವೇಶಗಳನ್ನು, ಘಟನೆಗಳನ್ನು ಪರಿಶೀಲಿಸಿ ತನ್ನದೇ ಆದ ನಿರ್ಧಾರಕ್ಕೆ ಬರಬೇಕೆಂದು ನ್ಯಾಯಶಾಸ್ತ್ರವು ಸೂಚಿಸುತ್ತದೆ. ನ್ಯಾಯಾಲಯದ ಮುಂದೆ ಬಂದಾಗ ಪ್ರತಿವಾದಿಯೂ, ವಾದಿಯೂ ಮಾಡಿರುವ ಆರೋಪವನ್ನು ನಿರಾಕರಿಸುವ ಸಂದರ್ಭದಲ್ಲಿ ವಾದಿಯು ಈ ಕಾರಣವನ್ನು ನಿರ್ದಿಷ್ಟವಾಗಿ ಸ್ಥಿರಪಡಿಸಬೇಕಾಗುತ್ತದೆ.

**ಕುಷ್ಠರೋಗ**

ದಂಪತಿಗಳಲ್ಲಿ ಯಾರಾದರೊಬ್ಬರೂ ಅರ್ಜಿ ಸಲ್ಲಿಸುವುದಕ್ಕೆ ಮುನ್ನ ಮೂರು ವರ್ಷಗಳ ಕಾಲ ನಿರಂತರವಾಗಿ ಉಗ್ರವಾದ ವಾಸಿ ಮಾಡಲಾಗದಂತಹ ವಿಷಪೂರಿತವಾದ ಕುಷ್ಠರೋಗದಿಂದ ನರಳುತ್ತಿದ್ದರೆ ವಿವಾಹ ವಿಚ್ಛೇದನೆ ಪಡೆಯಬಹುದು.

ಕುಷ್ಠರೋಗವು ಅಂಟುಜಾಡ್ಯವಾದುದರಿಂದ ಅಂತಹವರ ಸಂಪರ್ಕದಲ್ಲಿ ಸಮರಸದಿಂದ ದಾಂಪತ್ಯ ಜೀವನ ನಡೆಸಲು ಸಾಧ್ಯವಿಲ್ಲ. ಹಿಂದೂ ಸಂಪ್ರದಾಯದಲ್ಲಿ ಯಾವ ಕಾರಣಗಳಿಂದಲೂ ವಿವಾಹವು ವಿಚ್ಛೇದನೆಗೊಳ್ಳುವಂತಿರಲಿಲ್ಲ. ಇಂತಹ ವಿಷಮಯ ರೋಗದವರೊಡನೆ ಸಂಸರ್ಗ ಮಾಡುತ್ತಲೇ ಆರೋಗ್ಯವಂತರೂ ಸಂಕಟಕ್ಕೆ ತುತ್ತಾಗಬೇಕಾಗಿತ್ತು. ಅದನ್ನೇ ಪತಿವ್ರತ ಧರ್ಮ ಎಂಬ ಸೋಗಿನಲ್ಲಿ ಕರೆಯಲಾಗುತ್ತಿತ್ತು. ಈ ಶಾಸನವು ಅಂತಹ ಅಲೋಚನಾರಹಿತರಾದ ಪ್ರಸಂಗಗಳನ್ನು ಗಮನಿಸಿ ಈ ವಿಧಿಯನ್ನು ರೂಪಿಸಿದೆ. ಕುಷ್ಠರೋಗವು ವಿಷಮಯವಾದ ಮತ್ತು ವಾಸಿ ಮಾಡಲಾಗದ ರೋಗವೆಂಬುದನ್ನು ಅರ್ಜಿದಾರರು ಸ್ಥಿರಪಡಿಸಬೇಕು. ಈ ವಿಷಯದಲ್ಲಿ ತಮ್ಮ ಖಚಿತವಾದ ಅಭಿಪ್ರಾಯವನ್ನು ಕೊಡಬಲ್ಲ ಸಮರ್ಥರೆಂದರೆ ವೈದ್ಯರಷ್ಟೇ. ಆದರೆ ಪ್ರತಿವಾದಿಯನ್ನು ವೈದ್ಯ ಪರೀಕ್ಷೆಗೆ ಗುರಿಯಾಗುವಂತೆ ಒತ್ತಾಯ ಪಡಿಸಲು ಶಾಸನರೀತ್ಯಾ ಅವಕಾಶವಿಲ್ಲ. ಪ್ರತಿವಾದಿ ಒಪ್ಪಿದರೆ ಮಾತ್ರ ವೈದ್ಯ ಪರೀಕ್ಷೆ ನಡೆಯಬಹುದು. ಒಂದು ವೇಳೆ ವಾದಿ ಕೇಳಿದಾಗಲೂ ಮತ್ತು ನ್ಯಾಯಾಲಯವು ಹೇಳಿದಾಗಲೂ ಸಹ ಪ್ರತಿವಾದಿಯೂ ವೈದ್ಯ ಪರೀಕ್ಷೆಗೆ ಒಳಗಾಗಲು ಒಪ್ಪದಿದ್ದಲ್ಲಿ ಪ್ರತಿವಾದಿಯು ಸತ್ಯಾಂಶವನ್ನು ನ್ಯಾಯಾಲಯದ ಗಮನಕ್ಕೆ

ತರಲು ಹಿಮ್ಮೆಟ್ಟಿಸುತ್ತಿರುವನೆಂಬ ಕಾರಣದಿಂದ ವಾದಿಯ ಪರವಾದ ಅಭಿಪ್ರಾಯವನ್ನು ಹೊಂದಬಹುದೆಂದು ನ್ಯಾಯಾಲಯಗಳು ಒಪ್ಪಿವೆ.

ಎಲ್ಲ ವಿಧದ ಕುಷ್ಠರೋಗಗಳೂ ವಿಷಮವೂ ವಾಸಿಯಾಗದಂತಹ ರೋಗಗಳೂ ಆಗಿರುವುದಿಲ್ಲ. ಸೂಕ್ತ ವೈದ್ಯಕೀಯ ಚಿಕಿತ್ಸೆಯಾದರೆ ರೋಗವು ಗುಣವಾಗಬಹುದು. ವೈದ್ಯರು ಖಚಿತಪಡಿಸಿದರೆ ಕುಷ್ಠರೋಗದ ಕಾರಣವನ್ನು ಮುಂದಿಟ್ಟು ವಿವಾಹ ವಿಚ್ಛೇದನೆಯನ್ನು ಪಡೆಯಲು ಸಾಧ್ಯವಿಲ್ಲ. ಈ ರೋಗವು ಅರ್ಜಿ ಸಲ್ಲಿಸುವುದಕ್ಕೆ ಮುನ್ನ ಕೊನೆಯ ಪಕ್ಷ ಮೂರು ವರ್ಷಗಳ ಕಾಲದಿಂದಲೂ ಇದ್ದಿತ್ತೆಂಬುದನ್ನು, ವೈದ್ಯರ ನೆರವಿನಿಂದ ಅದು ಗುಣವಾಗದೇ ಇರುವುದರಿಂದ ದಾಂಪತ್ಯ ಜೀವನವು ಅಪಾಯಕಾರಿಯೆಂಬುದನ್ನು ಸ್ಥಿರಪಡಿಸಬೇಕು.

**ಮೇಹರೋಗಕಾರಣ (ಲೈಂಗಿಕ ರೋಗ)**

ಮೇಹರೋಗದ ಕಾರಣದ ಮೇಲೆ ವಿಚ್ಛೇದನವನ್ನು ಪಡೆಯಬೇಕಾದರೆ ಮುಖ್ಯವಾಗಿ ಮೂರು ಅಂಶಗಳನ್ನು ನ್ಯಾಯಾಲಯದಲ್ಲಿ ಸ್ಥಿರಪಡಿಸಬೇಕಾಗುತ್ತದೆ.

- ಪ್ರತಿವಾದಿಯು ಮೇಹರೋಗಕ್ಕೆ ತುತ್ತಾಗಿದ್ದಾರೆ.
- ಆ ರೋಗವು ಅರ್ಜಿ ಸಲ್ಲಿಸುವುದಕ್ಕೆ ಮುನ್ನ ಮೂರು ವರ್ಷಗಳಿಂದಲೂ ನಿರಂತರವಾಗಿದೆ.
- ಅದು ಅಂಟುಜಾಡ್ಯ. ಅಂದರೆ ಪರಸ್ಪರ ಸಂಪರ್ಕದಿಂದ ಮತ್ತೊಬ್ಬರಿಗೆ ಅದೇ ರೋಗ ಪ್ರಾಪ್ತಿಯಾಗುತ್ತದೆ ಎಂಬ ಅಂಶಗಳನ್ನು ಇಲ್ಲಿ ನಿರ್ಧರಿಸಬೇಕಾಗುತ್ತದೆ.

ಈ ಮೇಹರೋಗವು ಗಂಡನಿಂದ ಹೆಂಡತಿಗೆ ಬಂದಿರಬಹುದು. ಹೆಂಡತಿಯಿಂದ ಗಂಡನಿಗೆ ಬಂದಿರ ಬಹುದು. ಮೂರು ವರ್ಷಗಳ ಕಾಲ ಅಂಟುಜಾಡ್ಯದ ರೀತಿಯ ಮೇಹಜಾಡ್ಯಕ್ಕೆ ತುತ್ತಾಗಿದ್ದರೆ ವಿಚ್ಛೇದನೆ ಹೊಂದಲು ಅವಕಾಶವಿರುತ್ತದೆ.

**ಸಂಸಾರ ಪರಿತ್ಯಾಗ ಕಾರಣ**

ದಂಪತಿಗಳಲ್ಲಿ ಯಾರಾದರೊಬ್ಬರೂ ಸಂಸಾರ ಸಂಸರ್ಗವನ್ನೇ ತ್ಯಜಿಸಿ ಸಂನ್ಯಾಸವನ್ನು ಸ್ವೀಕರಿಸಿದ್ದರೆ ದಾಂಪತ್ಯ ವಿಚ್ಛೇದನವನ್ನು ಹೊಂದಬಹುದು. ಸಂಸಾರ ತ್ಯಾಗ ಮಾಡಿ ಸಂನ್ಯಾಸ ಸ್ವೀಕಾರ ಮಾಡಿದ ಮೇಲೆ ಸಾಂಸಾರಿಕ ಪ್ರಪಂಚದಲ್ಲಿ ಅವರು ಸತ್ತಂತೆಯೇ ಶಾಸನವು ಭಾವಿಸುತ್ತದೆ. ಏಕೆಂದರೆ ಅವರಿಗೂ ಮತ್ತಾವುದೇ ರೀತಿ ಸಾಂಸಾರಿಕ ಬಂಧುತ್ವಕ್ಕೂ ಯಾವ ಸಂಬಂಧವೂ ಇರುವುದಿಲ್ಲ. ಆದುದರಿಂದ ಸಂನ್ಯಾಸವನ್ನು ಸ್ವೀಕರಿಸಿದ್ದರೆ ದಾಂಪತ್ಯ ವಿಚ್ಛೇದನಕ್ಕೆ ಶಾಸನದಲ್ಲಿ ಅವಕಾಶ ಮಾಡಿ ಕೊಡಲಾಗುತ್ತದೆ. ಅಂದರೆ ಸಂನ್ಯಾಸ ಸ್ವೀಕಾರವು ಸಂಪೂರ್ಣ ಬದಲಾವಣೆಯಾಗಿರಬೇಕು. ಭಾರತೀಯ ಸಂಸ್ಕೃತಿಯಲ್ಲಿ ಸಂನ್ಯಾಸಕ್ಕೆ ವಿಶಿಷ್ಟವಾದ ಅರ್ಥವಿದೆ. ಹಿಂದೂ ಸಮಾಜಕ್ಕೆ ನಾಲ್ಕು ಅವಸ್ಥೆಗಳನ್ನು ಸಂಸ್ಕೃತಿಯು

ಸೂಚಿಸುತ್ತದೆ. ಬಾಲ್ಯಾವಸ್ಥೆಯಲ್ಲಿ ಬ್ರಹ್ಮಚರ್ಯಾಶ್ರಮವೆಂದು; ವಿವಾಹಿತನಾದಾಗ ಗೃಹಸ್ಥಾಶ್ರಮವೆಂದೂ, ಸಂಸಾರದಿಂದ ವಿಯೋಗ ಹೊಂದಿದಾಗ ಸಂನ್ಯಾಸಾಶ್ರಮವೆಂದೂ, ಕೊನೆಯದಾಗಿ ಎಲ್ಲರ ಹಂಗು ತೊರೆದು ಹೋಗುವುದಕ್ಕೆ ವಾನಪ್ರಸ್ಥಾಶ್ರಮವೆಂದೂ ಸಮಾಜದ ಸಾಮಾಜಿಕ ವ್ಯವಸ್ಥೆಯನ್ನು ಹೇಳಿದೆ. ಸಂನ್ಯಾಸದ ವೇಷ ಧರಿಸಿದ್ದವರೂ ಕೆಲವರು ಸಂಸಾರಿಗಳಾಗಿರುವುದಕ್ಕೆ ಕೆಲವು ಪಂಥಗಳಲ್ಲಿ ಅವಕಾಶವಿದೆ. ಬೈರಾಗಿಗಳನ್ನೂ ಸಂನ್ಯಾಸಿಗಳೆಂದರೂ ಸಹ ಅವರು ಸಂಸಾರಿಗಳಾಗಿರಲು ಅವಕಾಶವಿದೆ. ಅಂತಹ ಸಂಪ್ರದಾಯದಲ್ಲಿ ಸಂನ್ಯಾಸ ಸ್ವೀಕಾರ ಮಾಡಿದ ಕಾರಣಕ್ಕಾಗಿ ದಾಂಪತ್ಯ ವಿಚ್ಛೇದನಕ್ಕೆ ಅನುಮತಿ ನೀಡಬೇಕೆಂಬುದು ಸಂಶಯಾಸ್ಪದ ಸಂಗತಿಯಾಗಿದೆ. ಸಮಾಜದ ಅಂತರಾಳವು ಒಂದೇ ಆದರೂ ಸಹ ಭಿನ್ನಪಂಥಗಳೂ, ಸಂಪ್ರದಾಯಗಳೂ ಹಿಂದೂ ಸಮಾಜದಲ್ಲಿ ಬೆಳೆದು ಬಂದಿರುವುದರಿಂದ ಎಲ್ಲ ರೀತಿಯ ಸಂನ್ಯಾಸವೂ ವಿವಾಹ ವಿಚ್ಛೇದನಕ್ಕೆ ಅವಕಾಶ ನೀಡುತ್ತದೆಂದು ಹೇಳಲಾಗುವುದಿಲ್ಲ. ಸಾಂಸಾರಿಕ ಜೀವನದಿಂದ ದೂರವಾಗಿ ಬ್ರಹ್ಮಚರ್ಯೆ ಪಾಲನೆಯನ್ನು ಅನುಮೋದಿಸುವ ಸಂಪ್ರದಾಯದ ಸಂನ್ಯಾಸವನ್ನು ಸ್ವೀಕರಿಸಿದಲ್ಲಿ ವಿವಾಹ ವಿಚ್ಛೇದನಕ್ಕೆ ಶಾಸನರೀತ್ಯಾ ಅವಕಾಶವಿರುತ್ತದೆ. ಗಂಡನು ತನ್ನ ಸಂಸ್ಕಾರ ಬಲದಿಂದ ಅತ್ಯಂತ ಚಿಕ್ಕವಯಸ್ಸಿನಲ್ಲಿಯೇ ಸಂನ್ಯಾಸ ಸ್ವೀಕಾರ ಮಾಡಿದರೆ ಎಳೆಯ ವಯಸ್ಸಿನ ಹೆಂಡತಿಯು ಹಿಂದೂ ಸಂಪ್ರದಾಯದಂತೆ ಜೀವನ ಪರ್ಯಂತ ಅನಾಥಳಾಗಿ, ಅವಿವಾಹಿತಳಂತೆ ಒಂದು ದೃಷ್ಟಿಯಿಂದ ತಾನೂ ಸಂನ್ಯಾಸಿಯಂತೆ ಇರಬೇಕಾಗುತ್ತಿತ್ತು ಇಲ್ಲವೆ ದುರ್ಮಾರ್ಗ ಪ್ರವೃತ್ತಿಯಲ್ಲಿ ಕಾಲ ಕಳೆಯಬೇಕಾಗುತ್ತಿತ್ತು. ಆದರೆ ಈ ವಿಧಿಯಿಂದ ಅಂತಹ ಪ್ರಸಂಗದಲ್ಲಿ ಹೆಂಡತಿ ಗಂಡನಿಂದ ವಿವಾಹ ವಿಚ್ಛೇದನವನ್ನು ಹೊಂದಿ ತಾನು ಇಷ್ಟಪಟ್ಟಲ್ಲಿ ಪುನರ್‌ವಿವಾಹ ವಾಗಲೂ ಅವಕಾಶ ಮಾಡಿ ಕೊಡಲಾಗಿದೆ.

**ಕಣ್ಮರೆಯಾದ ಕಾರಣ**

ವಿವಾಹವಾದ ದಂಪತಿಗಳಲ್ಲಿ ಯಾರಾದರೊಬ್ಬರು ಇನ್ನೊಬ್ಬರನ್ನಾಗಲಿ ಏಳು ವರ್ಷಗಳ ಕಾಲಕ್ಕೂ ಮೀರಿ ಯಾರಿಗೂ ಗೋಚರವಾಗದಂತಿದ್ದರೆ ಅವರು ಮತ್ತೊಬ್ಬರ ದೃಷ್ಟಿಯಲ್ಲಿ ಮೃತರಾದರೆಂದೇ ಭಾವಿಸಬೇಕಾಗುತ್ತದೆ. ಹೀಗೆ ತಲೆಮರೆಸಿಕೊಂಡವರು ಏಳು ವರ್ಷಗಳ ಅವಧಿ ಮೀರುವವರೆಗೂ ಯಾರಿಗೂ ಸುಳಿವಿಲ್ಲದಂತಿದ್ದರೆ ಅವರು ತನ್ನ ಕುಟುಂಬದಲ್ಲಿದ್ದ ವಿಶಿಷ್ಟ ಹಕ್ಕನ್ನೂ ಕಳೆದುಕೊಳ್ಳುತ್ತಾರೆ. ಅವರು ತಮ್ಮ ಬಂಧುಬಳಗದವರಿಗಾಗಲೀ ಆಪ್ತೇಷ್ಟರಿಗಾಗಲಿ ಎಲ್ಲಿರುವರೆಂಬ ಸುಳಿವೇ ಸಿಕ್ಕದಿದ್ದಲ್ಲಿ ದಾಂಪತ್ಯ ವಿಚ್ಛೇದನಕ್ಕೆ ಶಾಸನವು ಅವಕಾಶ ಮಾಡಿಕೊಟ್ಟಿದೆ.

ಈ ಕಾರಣದಿಂದ ವಿವಾಹ ವಿಚ್ಛೇದನಕ್ಕೆ ಅರ್ಜಿ ಸಲ್ಲಿಸಿದಾಗ ವಾದಿಯೂ ಈ ಕೆಳಕಂಡ ಅಂಶಗಳನ್ನು ಸ್ಥಿರಪಡಿಸಬೇಕು.

- ವಿವಾಹವಾಗಿತ್ತು.
- ತಲೆತಪ್ಪಿಸಿಕೊಂಡಿರುತ್ತಾರೆ.

- ಅರ್ಜಿ ಸಲ್ಲಿಸುವ ಕಾಲಕ್ಕೆ ಏಳು ವರ್ಷಗಳ ಹಿಂದಿನಿಂದಲೂ ತಪ್ಪಿಸಿಕೊಂಡು ಹೋದ ವ್ಯಕ್ತಿ ಜೀವಂತವಾಗಿ ಇರುವರೋ ಇಲ್ಲವೋ ಎಂಬುದು ಯಾವ ಬಂಧುಬಳಗದವರಿಗೂ ತಿಳಿದು ಬಂದಿಲ್ಲ.
- ತಪ್ಪಿಸಿಕೊಂಡಿರುವವರನ್ನು ಹುಡುಕಲು ವಿವಿಧ ಪ್ರಯತ್ನಗಳನ್ನು ನಡೆಸಲಾಯಿತು.
- ಪ್ರಯತ್ನಗಳು ಸಫಲವಾಗಲಿಲ್ಲ.

ಈ ಅಂಶಗಳು ನ್ಯಾಯಾಲಯದಲ್ಲಿ ಸ್ಥಿರವಾದರೆ ಶಾಸನರೀತ್ಯಾ ಅರ್ಜಿಸಲ್ಲಿಸಿದರೆ ವಿವಾಹ ವಿಚ್ಛೇದನದ ಆಜ್ಞೆ ದೊರೆಯುತ್ತದೆ. ನ್ಯಾಯಾಲಯದ ಆಜ್ಞೆ ದೊರೆತ ಮೇಲೆ ತಪ್ಪಿಸಿಕೊಂಡಿದ್ದವರೂ ಹಿಂತಿರುಗಿ ಬಂದರೆ ಪೂರ್ವದ ಹಕ್ಕುಗಳು ಅವರಿಗೆ ದೊರೆಯುವುದಿಲ್ಲ.

**ನ್ಯಾಯ ನಿರ್ದೇಶನ ಪಾಲನೆಯ ಕಾರಣ**

ಹಿಂದೂ ವಿವಾಹ ಕಾಯ್ದೆಯ ಹತ್ತನೇ ವಿಧಿಯಂತೆ ವಿವಾಹ ಪರಿತ್ಯಾಗದ ನಿರ್ದೇಶನವನ್ನು ಪಡೆದ ದಂಪತಿಗಳು ಎರಡು ವರ್ಷಕ್ಕಿಂತಲೂ ಹೆಚ್ಚು ಕಾಲದಿಂದ ಮತ್ತೆ ದಾಂಪತ್ಯ ಸಂಪರ್ಕವನ್ನು ಹೊಂದದೇ ಇದ್ದರೆ ವಿವಾಹ ವಿಚ್ಛೇದನಕ್ಕೆ ಅರ್ಜಿಸಲ್ಲಿಸಬಹುದು. ದಂಪತಿಗಳಲ್ಲಿ ಯಾರಾದರೊಬ್ಬರೂ ಹತ್ತನೆಯ ವಿಧಿಯಲ್ಲಿ ಸೂಚಿಸಿರುವಂತೆ ಈ ಕೆಳಗಿನ ಕಾರಣಗಳಿಗಾಗಿ ಪ್ರತ್ಯೇಕತೆಯ ಆದೇಶವನ್ನು ನೀಡುತ್ತದೆ. ಇಲ್ಲಿ ಪ್ರತ್ಯೇಕತೆ ಎಂದರೆ ಪತಿ-ಪತ್ನಿ ಪ್ರತ್ಯೇಕವಾಗಿ ಜೀವನ ನಡೆಸುತ್ತಿರುತ್ತಾರೆ. ಇವರನ್ನು ಪತಿ-ಪತ್ನಿಯರೆಂದೇ ಭಾವಿಸಲಾಗಿರುತ್ತದೆ. ಹಾಗಾಗಿ ಇವರಿಗೆ ಮರುವಿವಾಹದ ಅವಕಾಶವು ಇರುವುದಿಲ್ಲ. ಇವರು ಪತಿ-ಪತ್ನಿಯರಲ್ಲ ಎಂದು ಗುರುತಿಸಿಕೊಳ್ಳಬೇಕಾಗಿದ್ದರೆ ವಿಚ್ಛೇದನೆ ಪಡೆಯಬೇಕಾಗಿರುತ್ತದೆ.

- ಅರ್ಜಿ ಕೊಡುವುದಕ್ಕೆ ಎರಡು ವರ್ಷಗಳಿಂದ ಒಬ್ಬರನ್ನೊಬ್ಬರು ತ್ಯಜಿಸಿ ಬೇರೆ ಬೇರೆ ಜೀವನ ನಡೆಸಿದ್ದರೆ.
- ಅರ್ಜಿದಾರರು ತಮ್ಮ ಸಹಭಾಗಿಯೊಡನಿರುವುದು ಅಪಾಯಕಾರಿ ಅಥವಾ ದುಸಾಧ್ಯವೆಂಬ ಭಯೋತ್ಪಾದನೆಯಾಗುವಂತಹ ಕ್ರೂರತನದಿಂದ ವರ್ತಿಸಿದ್ದರೆ.
- ಅರ್ಜಿ ಕೊಡುವುದಕ್ಕೆ ಒಂದು ವರ್ಷ ಮುಂಚಿನಿಂದಲೂ ಮತ್ತೊಬ್ಬರು ವಾಸಿಯಾಗಲು ಸಾಧ್ಯವಿಲ್ಲದಂತಹ ತೀವ್ರವಾದ ಕುಷ್ಠರೋಗದಿಂದ ನರಳುತ್ತಿದ್ದರೆ.
- ಅಂಟುರೋಗದಂತೆ ಕಾಯಿಲೆ.



- ಬುದ್ಧಿವಿಕಲ್ಪತನ.

ವಿವಾಹವಾದ ಮೇಲೆ ಹೆಂಡತಿಯು ಪರಪುರುಷರೊಡನೆಯೂ, ಗಂಡನು ಪರಸ್ತ್ರೀಯೊಡನೆಯೂ ದಾಂಪತ್ಯ ಭೋಗವನ್ನೆಸಗಿದ್ದರೆ ಈ ಕಾರಣಗಳಿಗಾಗಿ ದಂಪತಿಗಳು ಪ್ರತ್ಯೇಕವಾಗಿರಬಹುದೆಂದು

ನ್ಯಾಯಾಲಯವು ಆದೇಶ ನೀಡುತ್ತದೆ. ಈ ವಿಧಿಯನ್ವಯ ದಂಪತಿಗಳು ಪ್ರತ್ಯೇಕವಾಗಿರಬಹುದು. ಇವರಿಗೆ ವಿವಾಹ ಸಂಬಂಧದಿಂದ ಬಿಡುಗಡೆ ಸಿಕ್ಕಿರುವುದಿಲ್ಲ. ಇವರಿಗೆ ಮರುವಿವಾಹವಾಗಲು ಅವಕಾಶವಿರುವುದಿಲ್ಲ. ಸಂಪೂರ್ಣವಾಗಿ ಒಬ್ಬ ಪತಿ-ಪತ್ನಿಯಿಂದ ಬಿಡುಗಡೆ ಬೇಕಿದ್ದರೆ ವಿಚ್ಛೇದನೆ ಪಡೆಯುವುದು ಅವಶ್ಯಕವಾಗಿದೆ. ಹೆಂಡತಿಯು ಗಂಡನೊಡನೆ ಬಾಳಲು ಅಪೇಕ್ಷಿಸದೆ ಪ್ರತ್ಯೇಕವಾಗಿರಲು ಬಯಸಬಹುದು ಅಥವಾ ಗಂಡನು ಹೆಂಡತಿಯೊಡನೆ ಬಾಳಲು ಅಪೇಕ್ಷಿಸದೇ ಪ್ರತ್ಯೇಕವಾಗಿರಲು ಬಯಸಬಹುದು. ಇಬ್ಬರೂ ಒಂದು ವರ್ಷಗಳ ಕಾಲ ಅಥವಾ ಆ ಕಾಲಕ್ಕಿಂತಲೂ ಹೆಚ್ಚು ಕಾಲ ಕೂಡಿ ಬಾಳದೇ ಪ್ರತ್ಯೇಕವಾಗಿಯೇ ಇದ್ದರೆ ಇದನ್ನೇ ಸಕಾರಣವಾಗಿಟ್ಟುಕೊಂಡು ವಿವಾಹ ವಿಚ್ಛೇದನೆ ಪಡೆಯಲು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬಹುದಾಗಿದೆ. ಹೆಂಡತಿಯಾಗಿ ಗಂಡನೊಡನೆ ಬಾಳಲು ಅಪೇಕ್ಷಿಸದೇ ಪ್ರತ್ಯೇಕವಾಗಿರಲು ಪ್ರಯತ್ನಿಸಿದಾಗ ಗಂಡನು ಹೆಂಡತಿಯು ತನ್ನೊಡನೆ ಸಂಸಾರ ಮಾಡಿಕೊಂಡಿರಬೇಕೆಂದು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸುತ್ತಾನೆ. ಹೆಂಡತಿ ಪ್ರತಿವಾದಿಯಾಗಿರುತ್ತಾಳೆ. ನ್ಯಾಯಾಲಯದ ನಿರ್ದೇಶನದಂತೆ ಆಕೆ ಗಂಡನೊಡನೆ ಸೇರಬೇಕು. ಆದೇಶ ನೀಡಿ ಎರಡು ವರ್ಷಗಳ ಕಾಲ ಮೀರಿದರೂ ಆಕೆ ಅವನೊಡನೆ ಬಾಳಲು ಬರುವುದಿಲ್ಲ. ಅಂತಹ ಸಂದರ್ಭದಲ್ಲಿ ಗಂಡನೇ ಅರ್ಜಿ ಸಲ್ಲಿಸಿ ವಿಚ್ಛೇದನೆ ಪಡೆಯಬಹುದಾಗಿತ್ತೇ ಹೊರತು ಇದೇ ಕಾರಣದ ಮೇಲೆ ಹೆಂಡತಿಯು ಅರ್ಜಿಸಲ್ಲಿಸಿ ವಿಚ್ಛೇದನದ ಆಜ್ಞೆ ಪಡೆಯಲು ಅವಕಾಶವಿಲ್ಲ. ಆದರೆ ೧೯೬೪ರಲ್ಲಿ ಆದ ಬದಲಾವಣೆಯಂತೆ ಯಾರು ಬೇಕಾದರೂ ಅರ್ಜಿ ಸಲ್ಲಿಸಬಹುದು.

### ದಾಂಪತ್ಯದ ಹಕ್ಕುಗಳ ಮರು ಸ್ವಾಧೀನತೆಯ ಡಿಕ್ರಿಗೆ ಮನ್ನಣೆ ಕೊಡದಿರುವುದು

ದಾಂಪತ್ಯದ ಹಕ್ಕುಗಳ ಮರು ಸ್ವಾಧೀನತೆಯ ಡಿಕ್ರಿಯು ಜಾರಿಗೆಯಾಗಿ ಇಂಥ ಡಿಕ್ರಿಯು ಜಾರಿಯಾದ ಒಂದು ವರ್ಷದೊಳಗೆ ಇನ್ನೊಂದು ಪಕ್ಷವೂ ಇದಕ್ಕೆ ಮನ್ನಣೆ ಕೊಡದಿದ್ದರೆ ಈ ಡಿಕ್ರಿಯನ್ನು ಪಡೆದಿರುವ ಪಕ್ಷಕ್ಕೆ ವಿವಾಹ ವಿಚ್ಛೇದನದ ಡಿಕ್ರಿ ಪಡೆಯುವ ಅಧಿಕಾರವಿದೆ.

### ಕ್ರೌರ್ಯಕಾರಣ

ವಿವಾಹವು ಜರುಗಿದ ಬಳಿಕ ಅರ್ಜಿದಾರ ಪಕ್ಷದೊಂದಿಗೆ ಕ್ರೌರ್ಯದಿಂದ ವರ್ತಿಸಿದ್ದರೆ ಆ ಪಕ್ಷಕ್ಕೆ ವಿವಾಹ ವಿಚ್ಛೇದನದ ಡಿಕ್ರಿ ಪಡೆಯುವ ಅಧಿಕಾರವಿದೆ. ವಿವಾಹ ಕಾನೂನುಗಳ (ತಿದ್ದುಪಡಿ) ಅಧಿನಿಯಮ ೧೯೭೬ ಜಾರಿಗೆ ಬಂದ ಬಳಿಕ ಕ್ರೌರ್ಯವು ಒಂದು ವಿವಾಹ ವಿಚ್ಛೇದನದ ಕಾರಣವಾಗಿದೆ. ಕ್ರೌರ್ಯವು ಅಸ್ತಿತ್ವದಲ್ಲಿರುವುದು ಕಂಡು ಬಂದಾಗ ದಂಪತಿಗಳಿಗೆ ಪ್ರತ್ಯೇಕವಾಗಿ ನಿವಾಸ ಮಾಡಲು ಮತ್ತು ವಿವಾಹವನ್ನು ವಿಘಟಿತಗೊಳಿಸಲು ಅನುಮತಿ ಇರುವುದು ಯುಕ್ತವಾಗಿದೆ.

ಕ್ರೌರ್ಯ ಎಂಬ ಪದಕ್ಕೆ ಕಾನೂನಿನಲ್ಲಿ ಒಂದು ವಿಶಿಷ್ಟವಾದ ಅರ್ಥವಿದೆ. ಇದು ಜನಸಾಮಾನ್ಯರು ತಿಳಿದಿರುವ ಅರ್ಥಕ್ಕಿಂತ ಭಿನ್ನವಾಗಿದೆ. 'ಪ್ರೀವ್ಹಿ ಕೌನ್ಸಿಲ್' ಕ್ರೌರ್ಯದ ಅರ್ಥವನ್ನು ಈ ರೀತಿಯಾಗಿ ಕೊಟ್ಟಿದೆ. "ಜೀವಕ್ಕೆ ಗಂಡಾಂತರ ಅಥವಾ ಶಾರೀರಿಕವಾಗಿ ಅಥವಾ ಮಾನಸಿಕವಾಗಿ ಆರೋಗ್ಯಕ್ಕೆ ಹಾನಿ ಅಥವಾ ಇದರ ಯುಕ್ತವಾದ ನಿರೀಕ್ಷೆಯಿದ್ದರೆ ಇದು ಕಾನೂನಿನಲ್ಲಿ ಕ್ರೌರ್ಯವಾಗುತ್ತದೆ.

ವೈವಾಹಿಕ ಕಾನೂನಿನಲ್ಲಿ ಕ್ರೌರ್ಯವು ಅನೇಕ ರೀತಿಯದ್ದಾಗಿರಬಹುದು. ಇದು ಸೂಕ್ಷ್ಮ ಅಥವಾ ಕೇವಲ ಮೌನದಿಂದ, ಹಿಂಸೆಯಿಂದ ಅಥವಾ ಅಹಿಂಸೆಯಿಂದ ನಡೆದಿರಬಹುದು. ಇದೇ ಕಾರಣಕ್ಕಾಗಿ ನ್ಯಾಯಾಲಯಗಳು ವೈವಾಹಿಕ ಕ್ರೌರ್ಯದ ಪ್ರತ್ಯೇಕ ಪರಿಭಾಷೆಯೊಂದನ್ನು ಕೊಟ್ಟಿಲ್ಲ. ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಗಳು ಬದಲಾದಂತೆ ಕಾಲದಿಂದ ಕಾಲಕ್ಕೆ ಕ್ರೌರ್ಯದ ಭಾವ ಸ್ವರೂಪದಲ್ಲಿ ಬದಲಾವಣೆಗಳಾಗಿವೆ. ಸಿದ್ಧಾಂತದಲ್ಲಿಲ್ಲ, ಅದರ ಅನ್ವಯದಲ್ಲಿ ಈ ಕಲಮಿನಲ್ಲಿ ಹೇಳಲಾದ ಕ್ರೌರ್ಯವು ಶಾರೀರಿಕ ಕ್ರೌರ್ಯವಾಗಿರಬೇಕಾಗಿಲ್ಲ. ಇದು ಮಾನಸಿಕ ಕ್ರೌರ್ಯವನ್ನು ಒಳಗೊಳ್ಳುತ್ತದೆ. ಕ್ರೌರ್ಯದ ಪ್ರಶ್ನೆಯನ್ನು ನಿರ್ಣಯಿಸುವಾಗ ಸಂಬಂಧಪಟ್ಟ ಎಲ್ಲಾ ಸಂಗತಿಗಳನ್ನು ಮತ್ತು ಅರ್ಜಿದಾರರುಗಳ ವೈವಾಹಿಕ ಸಂಬಂಧವನ್ನು ಗಮನಕ್ಕೆ ತೆಗೆದುಕೊಳ್ಳತಕ್ಕದ್ದು. ಇದನ್ನು ಪರಿಸ್ಥಿತಿಗಳ ಸಂಚಿತ ಪರಿಣಾಮವೆಂದು ನಿರ್ಣಯಿಸಬೇಕು. ಅವರ ಸಂಸಾರ ಮನೋಧರ್ಮ, ಜೀವನ ಅಂತಸ್ತು ಆರೋಗ್ಯ ಅವರ ದೈನಂದಿನ ಜೀವನದ ಕ್ರಿಯೆ, ಪ್ರತಿಕ್ರಿಯೆ ಮತ್ತು ಅನೇಕ ಸಂಗತಿಗಳನ್ನು ಗಮನಿಸಬೇಕು. ಹಿಂದೆ ಮಾಡಿದನೆನ್ನಲಾದ ಅಪರಾಧಕ್ಕಾಗಿ ಗಂಡನನ್ನು ದಂಡಿಸುವುದು ನ್ಯಾಯಾಲಯದ ಕರ್ತವ್ಯವಲ್ಲ. ಮುಂದೆ ನಡೆಯಬಹುದಾದ ಹಾನಿಯಿಂದ ಹೆಂಡತಿಯನ್ನು ರಕ್ಷಿಸುವುದು ಅದರ ಕರ್ತವ್ಯ.

### ಕ್ರೌರ್ಯವು ಶಾರೀರಿಕ ಅಥವಾ ನೈತಿಕವಾಗಿರಬಹುದು

"ಶಾರೀರಿಕ ಕ್ರೌರ್ಯ"ವು ಕೇವಲ ಶ್ರೇಣಿಗಳ ಹಿಂಸೆಯಾಗಿರಬಹುದು ಮತ್ತು ಕಾನೂನಿನ ದೃಷ್ಟಿಯಲ್ಲಿ ಕ್ರೌರ್ಯವೆಂದು ಹೇಳಿಕೊಳ್ಳಲು ಈ ಶ್ರೇಣಿಗಳು ಪಕ್ಷಗಾರರ ಸಾಮಾಜಿಕ ಅಂತಸ್ತಿಗೆ ತಕ್ಕಂತೆ ಬೇರೆ ಬೇರೆಯಾಗಿರಬಹುದು. ಎಲ್ಲಿ ಶಾರೀರಿಕ ಗಾಯ ಮಾಡಲ್ಪಟ್ಟಿದೆಯೋ ಅಥವಾ ಜೀವಕ್ಕೆ, ಅವಯವಕ್ಕೆ ಅಥವಾ ಶರೀರಕ್ಕೆ ಅಥವಾ ಮನಸ್ಸಿಗೆ ಅಪಾಯವಾಗುವ ಯುಕ್ತ ನಿರೀಕ್ಷೆಯಿದೆಯೋ ಅಲ್ಲಿ ಕ್ರೌರ್ಯವೆಂಬ ನಿರ್ಣಯಕ್ಕೆ ಬರುವುದು ಸುಲಭ.

"ನೈತಿಕ ಕ್ರೌರ್ಯ" (ಮಾನಸಿಕ ಹಿಂಸೆ) ಶಾರೀರಿಕ ಹಿಂಸೆಯಲ್ಲದ ಕೆಲವಷ್ಟು ಪರಿಸ್ಥಿತಿಗಳಾಗಿದ್ದರೂ ಸಹ ಕ್ರೌರ್ಯವೆಂದು ಅರ್ಥ ಕೊಡುತ್ತದೆ. ದುರುದ್ದೇಶದಿಂದ ಕೂಡಿದ ಸುಳ್ಳು ಆರೋಪ, ಒರಟುತನ, ವೇಶ್ಯಾವೃತ್ತಿಗೆ ತೊಡಗುವಂತೆ ಪತ್ನಿಯನ್ನು ಬಲಾತ್ಕರಿಸುವುದು, ಗರ್ಭಿಣಿ ಪತ್ನಿಯನ್ನು ಹೆದರಿಸುವುದು, ಘನತೆಗೆ ದಕ್ಕೆ ತರುವಂತೆ ಮಾಡುವುದು, ಕಾನೂನಿನಲ್ಲಿ ಅನೈತಿಕವೆನಿಸಿಕೊಳ್ಳುತ್ತದೆ.

### ಅಭಿತ್ಯಜನೆ ಕಾರಣ

ಅಭಿತ್ಯಜನೆ ಎಂದರೆ ಅರ್ಜಿದಾರ ಪಕ್ಷವನ್ನು ವಿವಾಹದ ಇನ್ನೊಂದು ಪಕ್ಷವು ಯುಕ್ತ ಕಾರಣವಿಲ್ಲದೆ ಅಥವಾ ಅರ್ಜಿದಾರ ಪಕ್ಷದ ಸಮ್ಮತಿಯಿಲ್ಲದೆ ಅಥವಾ ಅಂಥ ಪಕ್ಷದ ಇಚ್ಛೆಯ ವಿರುದ್ಧ ಅಭಿತ್ಯಜಿಸುವುದು ಮತ್ತು ಇದು ಅರ್ಜಿದಾರ ಪಕ್ಷಕ್ಕೆ ಇನ್ನೊಂದು ಪಕ್ಷವು ಉದ್ದೇಶಪೂರ್ವಕವಾಗಿ ಮಾಡಿದ ನಿರ್ಲಕ್ಷ್ಯವನ್ನು ಒಳಗೊಂಡಿರುತ್ತದೆ. ಮೂಲತಃ ಅಭಿತ್ಯಜನೆ ಎಂದರೆ ಕಕ್ಷಿದಾರರಲ್ಲಿ ಒಂದನ್ನು ಇನ್ನೊಂದು ಪರಿತ್ಯಜಿಸುವುದು

ಅಥವಾ ತೊರೆಯುವುದು. ಅಪರಾಧ ಮಾಡುತ್ತಿರುವ ಪಕ್ಷವನ್ನು ಅದರ ಇಚ್ಛೆಯ ವಿರುದ್ಧ ಮತ್ತೊಂದು ಪಕ್ಷವು ಪರಿತ್ಯಜನೆ ಮಾಡುವುದೇ ಅಭಿತ್ಯಜನೆಯಾಗಿದೆ.

ಅಭಿತ್ಯಜನೆಯಿಂದ ಆರೋಪಿತನಾದ ಕಕ್ಷಿದಾರರಲ್ಲಿನ ಸಂಬಂಧದಲ್ಲಿ ಅಭಿತ್ಯಜನೆಯ ಆರೋಪವನ್ನು ಸಾಬೀತು ಮಾಡಲು ಎರಡು ಷರತ್ತುಗಳು ಅನಿವಾರ್ಯ.

೧. ಪ್ರತ್ಯೇಕವಾಗಿರುವ ಸಂಗತಿ.

೨. ಸಹವಾಸವನ್ನು ಶಾಶ್ವತವಾಗಿ ಕೊನೆಗೊಳಿಸುವ ಉದ್ದೇಶ.

ಇದೇ ರೀತಿಯಲ್ಲಿ ಅಭಿತ್ಯಜನೆ ಮಾಡಲ್ಪಟ್ಟ ಕಕ್ಷಿದಾರರಲ್ಲಿನ ಸಂಬಂಧದಲ್ಲೂ ಸಹ ಎರಡು ಷರತ್ತುಗಳಿವೆ.

೧. ಸಮ್ಮತಿ ಇಲ್ಲದಿರುವಿಕೆ.

೨. ವಿವಾಹಿತ ಮನೆಯನ್ನು ಬಿಡುವ ಕಕ್ಷಿದಾರರಿಗೆ ಮೇಲ್ಕಾಣಿಸಿದ ಉದ್ದೇಶದ ಯುಕ್ತಕಾರಣವನ್ನು ಕೊಡುವ ನಡತೆಯ ಕೊರತೆ ವಿವಾಹ ವಿಚ್ಛೇದನಕ್ಕಾಗಿ ಅರ್ಜಿ ಮಾಡುವಾಗ ಪುರಾವೆಯ ಪ್ರಭಾರವು ಕಾನೂನಿನಲ್ಲಿ ಉಲ್ಲೇಖಿಸಲಾದ ಕಾಲಾವಧಿಯಲ್ಲಿ ಸತತವಾಗಿ ಮುಂದುವರೆಯುವುದು ಯಥಾನುಸಾರ ಇಬ್ಬರೂ ಕಕ್ಷಿದಾರರ ಮೇಲಿದೆ.

ಅಭಿತ್ಯಜನೆಯೊಂದು ಘಟಿತವಾಗಬೇಕಾದರೆ ಅದರಲ್ಲಿ ಈ ಕೆಳಗಿನ ಸಂಗತಿಗಳು ಇರತಕ್ಕದು :

ಎ. ಅಭಿತ್ಯಜನೆಯು ಉದ್ದೇಶರಹಿತವಾಗಿರತಕ್ಕದ್ದು.

ಬಿ. ಅಭಿತ್ಯಜನೆ ಮಾಡಲ್ಪಟ್ಟ ಪಕ್ಷದವರು ಪ್ರತ್ಯೇಕೀಕರಣಕ್ಕೆ ಒಪ್ಪಿಕೊಂಡಿರಬಾರದು.

ಸಿ. ಅಭಿತ್ಯಜನೆ ಮಾಡುವ ಕಕ್ಷಿದಾರರಲ್ಲಿ ಇನ್ನೊಂದು ಕಕ್ಷಿದಾರರನ್ನು ಅಭಿತ್ಯಜನೆ ಮಾಡುವ ಉದ್ದೇಶ ವಿರಬೇಕು.

ಡಿ. ಕೂಡುಬಾಳ್ವೆಯನ್ನು ಕೊನೆಗೊಳಿಸಿರಬೇಕು ಅಥವಾ ಪ್ರತ್ಯೇಕಿಸಲ್ಪಟ್ಟಿರಬೇಕು.

ಮೇಲಿನ ತಿಳಿಸಿದ ಕಾರಣಗಳು ಪತಿ-ಪತ್ನಿಯರಿಬ್ಬರಿಗೂ ಅನ್ವಯಿಸುತ್ತವೆ. ಇಬ್ಬರೂ ಮೇಲಿನ ಕಾರಣಗಳಿಗಾಗಿ ವಿವಾಹ ವಿಚ್ಛೇದನವನ್ನು ಪಡೆಯಬಹುದು. ಆದರೆ ಹಿಂದೂ ವಿವಾಹ ಕಾಯ್ದೆ ೧೩(೨)ನೇ ಪ್ರಕರಣದ ಮೇರೆಗೆ ಇರುವ ಪ್ರತ್ಯೇಕ ಕಾರಣಗಳು ಪತ್ನಿಗೆ ಮಾತ್ರವೇ ವಿಚ್ಛೇದನದ ಅರ್ಜಿ ಸಲ್ಲಿಸುವ ಕಾರಣಗಳನ್ನು ಹೇಳಿದೆ.

೧. ಈ ಶಾಸನವು ಜಾರಿಗೆ ಬರುವ ಮುನ್ನ ಒಬ್ಬ ಹೆಂಡತಿಯು ಬದುಕಿರುವಾಗ ಮತ್ತೊಬ್ಬಳನ್ನು ಲಗ್ನವಾದರೆ ಅವರಲ್ಲಿ ಯಾರಾದರೊಬ್ಬರು ವಿವಾಹ ವಿಚ್ಛೇದನಕ್ಕೆ ಅರ್ಜಿ ಸಲ್ಲಿಸಬಹುದು. ಅರ್ಜಿ ಸಲ್ಲಿಸುವ ಸಮಯದಲ್ಲಿ ಇಬ್ಬರು ಹೆಂಡತಿಯರೂ ಬದುಕಿದ್ದರೆ ಮಾತ್ರ ಈ ಕಾರಣದ ಮೇಲೆ ವಿವಾಹ

ವಿಚ್ಛೇದನಕ್ಕೆ ಅರ್ಜಿ ಸಲ್ಲಿಸಬಹುದು. ಅಂದರೆ ಈ ಶಾಸನ ಜಾರಿಗೆ ಬರುವ ಮುನ್ನ ಇಬ್ಬರೂ ಹೆಡಂತಿಯರಿದ್ದರೆ ಈ ಶಾಸನ ಜಾರಿಗೆ ಬಂದ ಮೇಲೆ ಆ ಹೆಂಡತಿಯರಿಗೆ ವಿವಾಹ ವಿಚ್ಛೇದನ ಮಾಡಿ ಕೊಳ್ಳಲು ಅವಕಾಶ ಮಾಡಿಕೊಡಲಾಗಿದೆ. ಹಾಗೆ ವಿಚ್ಛೇದನೆ ಮಾಡಿಕೊಳ್ಳದೇ ಇದ್ದರೆ ಇಬ್ಬರು ಹೆಂಡತಿಯರಿದ್ದರೆಂಬುದು ಅಪರಾಧವೆನಿಸುವುದಿಲ್ಲ. ಇಷ್ಟಪಟ್ಟಲ್ಲಿ ಇಬ್ಬರು ಹೆಂಡತಿಯರೂ ಇರಬಹುದು. ಇಷ್ಟಪಡದೇ ಇದ್ದರೆ ವಿಚ್ಛೇದನೆಯನ್ನು ಪಡೆಯಬಹುದು. ಈ ಶಾಸನವು ಜಾರಿಗೆ ಬಂದ ಮೇಲೆ ಮೊದಲೇ ವಿವಾಹವಾಗಿದ್ದರೂ ಸಹ ಅವರು ವಿವಾಹ ವಿಚ್ಛೇದನೆ ಪಡೆಯಲು ಅವಕಾಶವಿದೆ. ಈ ಉಪವಿಧಿಯಂತೆ ಇಬ್ಬರಲ್ಲಿ ಯಾರಾದರೊಬ್ಬರೂ ಮಾತ್ರ ವಿಚ್ಛೇದನೆ ಪಡೆಯಬೇಕೆಂದು ಸೂಚನೆಯಿಲ್ಲ. ಕಾರಣವು ಇಬ್ಬರಿಗೂ ಅನ್ವಯಿಸುವುದರಿಂದ ಇಬ್ಬರು ಹೆಂಡತಿಯರೂ ಸಹ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಿ ವಿವಾಹ ವಿಚ್ಛೇದನ ಪಡೆಯಬಹುದು. ಹೀಗೆ ಇಬ್ಬರೂ ಏಕಕಾಲದಲ್ಲಿ ವಿಚ್ಛೇದನ ಪಡೆಯುವುದರಿಂದ ಗಂಡನಿಗೆ ತೊಂದರೆ ಯಾಗುತ್ತದೆ. ಆದುದರಿಂದ ಇಬ್ಬರಲ್ಲಿ ಒಬ್ಬರಿಗೆ ಮಾತ್ರ ಅವಕಾಶವಿದೆ. ಮತ್ತೊಬ್ಬರಿಗೆ ಅವಕಾಶವಿಲ್ಲ ಎಂದು ಹೇಳುವಂತಿಲ್ಲ ಅಥವಾ ಎರಡನೇ ಲಗ್ನವಾಗುವಾಗ ಮೊದಲನೇ ಹೆಂಡತಿಯು ಒಪ್ಪಿಗೆ ನೀಡಿದ್ದಳೆಂದೂ ಅವಳು ಅದಕ್ಕೆ ವಿರುದ್ಧವಾಗಿ ವಿಚ್ಛೇದನವನ್ನು ಕೋರುವಂತಿಲ್ಲವೆಂದೂ ಹೇಳುವಂತಿಲ್ಲ. ಈ ಉಪವಿಧಿಯನ್ನು ಅನುಸರಿಸಿ ಇಬ್ಬರೂ ಹೆಂಡತಿಯರೂ ಗಂಡನಿಂದ ವಿವಾಹ ವಿಚ್ಛೇದನವನ್ನು ಪಡೆಯಬಹುದೆಂದು ನ್ಯಾಯಾಲಯಗಳು ನಿರ್ದಿಷ್ಟವಾಗಿ ತಮ್ಮ ಅಭಿಪ್ರಾಯವನ್ನು ಸೂಚಿಸಿರುವುದು ಗಮನಾರ್ಹ.

೨. ವಿವಾಹವಾದ ಮೇಲೆ ಗಂಡನು ಹೆಂಡತಿಯ ಮೇಲೆ ಅತಿಕ್ರಮ ಸಂಭೋಗ ಮಾಡಲೆತ್ನಿಸಿದ ಅಪರಾಧಕ್ಕೆ ಗುರಿಯಾಗಿದ್ದರೂ ಸಹ ಹೆಂಡತಿಯೂ ಅರ್ಜಿ ಸಲ್ಲಿಸಿ ವಿವಾಹ ವಿಚ್ಛೇದನೆ ಪಡೆಯಬಹುದು. ಹೆಂಡತಿಯನ್ನು ಬಲತ್ಕಾರದಿಂದ ಸಂಭೋಗ ಮಾಡುವುದು, ಮಾಡಲು ಪ್ರಯತ್ನಿಸುವುದು ಅಪರಾಧವೆಂದು ಪರಿಗಣಿಸಲಾಗಿದೆ.

೩. ಗಂಡನು ಪುರುಷ ಮೈಥುನದ ಚಾಳಿಯನ್ನು ಹೊಂದಿದ್ದು, ದಾಂಪತ್ಯ ಜೀವನಕ್ಕೆ ಅನರ್ಹ ನಾಗಿದ್ದನೆಂಬ ಕಾರಣವನ್ನು ಸ್ಥಿರಪಡಿಸಲು ಸಾಧ್ಯವಿದ್ದರೂ ಸಹ ಹೆಂಡತಿಯು ಅರ್ಜಿ ಸಲ್ಲಿಸಿ ವಿವಾಹ ವಿಚ್ಛೇದನವನ್ನು ಪಡೆಯಬಹುದು.

ಗಂಡನು ವಿಷಯ ಲಂಪಟನಾಗಿ ಪಶುರೂಪದಲ್ಲಿ ಅನಾಗರಿಕವಾಗಿ ಅಶ್ಲೀಲ ರೀತಿಯಲ್ಲಿ ಹೆಂಡತಿಯ ಮನೋಗತಕ್ಕೆ ವಿರುದ್ಧವಾಗಿ ಆಕೆಯ ಸೌಜನ್ಯವನ್ನು ಮೀರುವಂತೆ ಕ್ರೌರ್ಯದಿಂದ ದಾಂಪತ್ಯ ಸಂಭೋಗವನ್ನು ಅಪೇಕ್ಷಿಸುವವನಾಗಿದ್ದರೆ ಅವನಿಂದ ವಿಚ್ಛೇದನೆ ಹೊಂದಲು ಹೆಂಡತಿಯು ಅರ್ಜಿ ಸಲ್ಲಿಸಲು ಅವಕಾಶ ಮಾಡಿಕೊಡಲಾಗಿದೆ.

ಅತಿಕ್ರಮ ಸಂಭೋಗವು ಅಪರಾಧವೆಂದು ಭಾರತ ಶಿಕ್ಷಾಶಾಸನದ ೩೭೫ನೆಯ ವಿಧಿಯಲ್ಲಿ ಸೂಚಿಸಿದೆ. ಅತಿಕ್ರಮ ಸಂಭೋಗ(Rape)ವೆಂದರೆ ಏನು ಎಂಬುದನ್ನು ಆ ವಿಧಿಯಲ್ಲಿ ವಿವರಿಸಿದೆ.

೧. ಹೆಣ್ಣಿನ ಅಭಿಮತಕ್ಕೆ ವಿರೋಧವಾಗಿಯೂ

೨. ಅವರ ಅನುಮತಿಯನ್ನು ಪಡೆಯದೇ ಸಂಭೋಗಿಸುವುದು ಅಥವಾ

೩. ಹೆಣ್ಣಿಗೆ ಮಾನ ಮತ್ತು ಪ್ರಾಣಹರಣದ ಭೀತಿಯನ್ನುಂಟುಮಾಡಿ ಅನುಮತಿಯನ್ನು ಪಡೆದುಕೊಂಡು ಸಂಭೋಗಿಸುವುದು.

೪. ತಾನೇ ಆಕೆಯ ಗಂಡನೆಂದು ವಂಚನೆ ಮಾಡಿ ಸಂಭೋಗಿಸಿದರೂ ಸಹ ಗಂಡನು ಅತಿಕ್ರಮ ಸಂಭೋಗದ ಅಪರಾಧಿಯೆನಿಸುತ್ತಾನೆ. ಹೆಣ್ಣು ತನ್ನ ಹೆಂಡತಿಯಾದರೂ ಸಹ ಮೇಲಿನ ೧ ರಿಂದ ೩ರವರೆಗಿನ ವಿವರಣೆಗೆ ಬರುವುದಾದರೆ ಗಂಡನು ಅಪರಾಧಿಯೆಂದೇ ಪರಿಗಣಿಸಲ್ಪಡುತ್ತದೆ.

೫. ಹೆಣ್ಣು ತನ್ನ ಹೆಂಡತಿಯಾದರೂ ಸಹ ಆಕೆಯು ಹನ್ನೆರಡು ವರ್ಷ ವಯಸ್ಸಿಗಿಂತಲೂ ಕಿರಿಯಳಾದರೆ ಅವಳೊಡನೆ ಸಂಭೋಗ ನಡೆಸಿದರೆ ಶಿಕ್ಷಾಶಾಸನದಂತೆ ಈ ಅಪರಾಧಕ್ಕೆ ಗುರಿಯಾಗಿರಬೇಕಾಗುತ್ತದೆ.

ಸಂಭೋಗದಿಂದ ವೀರ್ಯಸ್ಖಲನವಾಗದಿರಬಹುದು. ಜನಜನಾಂಗಗಳ ಸಂಪರ್ಕವಾದರೂ ಸಹ ಅದು ಅಪರಾಧವೆನಿಸುತ್ತವೆಂದು ಈ ವಿಧಿಯಲ್ಲಿ ವಿವರಣೆಯನ್ನು ನೀಡಲಾಗಿದೆ. ಇಲ್ಲಿ ಕೃತಿಗಿಂತಲೂ ಅಪರಾಧಿಯ ದೌರ್ಜನ್ಯ ಮನೋಭಾವ ಮತ್ತು ಅದರಂತೆ ಅವನು ನಡೆಸಿದ ಪ್ರಯತ್ನ ಶಾಸನರೀತ್ಯಾ ಅಪರಾಧವಾಗುತ್ತದೆ.

ಕಾನೂನಿನನ್ವಯ ವಿವಾಹ ವಿಚ್ಛೇದನೆಯನ್ನು ಪಡೆಯಬಹುದಾಗಿದ್ದರೂ ವಿವಾಹವಾದ ಸ್ವಲ್ಪ ದಿನಕ್ಕೆ ನ್ಯಾಯಾಲಯದಲ್ಲಿ ವಿಚ್ಛೇದನೆ ಅರ್ಜಿ ಸಲ್ಲಿಸುವ ಅಧಿಕಾರ ಗಂಡನಿಗಾಗಲೀ ಹೆಂಡತಿಗಾಗಲೀ ಇರುವುದಿಲ್ಲ. ಅದಕ್ಕಾಗಿ 'ಹಿಂದೂ ವಿವಾಹ ಕಾಯ್ದೆ'ಯು ಹದಿನಾಲ್ಕನೆಯ ವಿಧಿಯು ವಿವಾಹವಾಗಿ ಎಷ್ಟು ಸಮಯಕ್ಕೆ ವಿಚ್ಛೇದನೆ ಅರ್ಜಿ ಸಲ್ಲಿಸಬೇಕು ಎನ್ನುವುದರ ಕಾಲಮಿತಿಯನ್ನು ಸೂಚಿಸುತ್ತದೆ. ಹಿಂದೂ ವಿವಾಹ ಕಾಯ್ದೆ ೧೯೫೫ರ ಪ್ರಕಾರ ವಿವಾಹವಾಗಿ ಮೂರು ವರ್ಷದ ಬಳಿಕ ವಿಚ್ಛೇದನೆ ಅರ್ಜಿ ಸಲ್ಲಿಸಬೇಕು ಎಂದು ವಿಧಿಯು ಸೂಚಿಸುತ್ತಾದರೂ ೧೯೭೬ರಲ್ಲಿ ತಿದ್ದುಪಡಿಗೊಳಗಾದ ವಿಧಿಯನ್ವಯ ಈ ಕಾಲಮಿತಿಯನ್ನು ಮೂರು ವರ್ಷದಿಂದ ಒಂದು ವರ್ಷಕ್ಕೆ ಇಳಿಸಲಾಯಿತು. ವಿವಾಹವಾಗಿ ಒಂದು ವರ್ಷಗಳ ಕಾಲ ತುಂಬುವವರೆಗೂ ಗಂಡನಾಗಲೀ ಹೆಂಡತಿಯಾಗಲೀ ಸಲ್ಲಿಸಬಹುದಾದ ವಿವಾಹ ವಿಚ್ಛೇದನದ ಅರ್ಜಿಯನ್ನು ವಿಚಾರಣೆಗೆ ಸ್ವೀಕರಿಸುವ ಅಧಿಕಾರ ಯಾವ ನ್ಯಾಯಾಲಯಕ್ಕೂ ಇಲ್ಲವೆಂದು ಈ ವಿಧಿಯಲ್ಲಿ ಸೂಚಿಸಲಾಗಿದೆ.

ಆದಾಗ್ಯೂ ಕೆಲವು ಅನಿರೀಕ್ಷಿತ ಕಾರಣಗಳಿಗಾಗಿ ಅಂದರೆ ಗಂಡ-ಹೆಂಡತಿಯರಲ್ಲಿ ಯಾರಿಗಾದರೂ ಅನಿರೀಕ್ಷಿತ ಅಪಾಯ ಸಂಭವಿಸಬಹುದೆಂಬ ವಿಶಿಷ್ಟ ಕಾರಣಗಳಿದ್ದರೆ ಮಾತ್ರ ವಿವಾಹವಾಗಿ ಒಂದು ವರ್ಷಗಳಾಗದಿದ್ದರೂ ಸಹ ಅರ್ಜಿ ಸಲ್ಲಿಸುವ ಅವಕಾಶ ಮಾಡಿಕೊಡಲಾಗಿದೆ.

- ಪ್ರತಿವಾದಿಯೊಂದಿಗೆ ಬಾಳಲು ವಾದಿಗೆ ಸಾಧ್ಯವೇ ಇಲ್ಲವೆಂಬ ವಿಶೇಷ ಕಾರಣವಿರಬೇಕು.
- ವಾದಿಗೆ ಪ್ರತಿವಾದಿಯಿಂದ ಸಹಿಸಲಾರದ ಕಷ್ಟ ಪರಂಪರೆಯುಂಟಾಗುತ್ತದೆಂಬ ಸೂಚನೆಯಿರಬೇಕು.

ಅವಧಿಗೂ ಮುನ್ನ ವಿಚ್ಛೇದನಕ್ಕೆ ಅರ್ಜಿ ಸಲ್ಲಿಸುವುದಕ್ಕೆ ವಿಶೇಷ ಕಾರಣಗಳಾವುವು ಎಂಬುದು ಈ ವಿಧಿಯಲ್ಲಿ ಸ್ಪಷ್ಟವಾಗಿ ವಿವರಿಸಿಲ್ಲವಾದ್ದರಿಂದ ಅರ್ಜಿ ಸಲ್ಲಿಸಲು ಕೆಲವು ಸಕಾರಣಗಳನ್ನು ಊಹಿಸಬಹುದೆಂದು ತಜ್ಞರು ಅಭಿಪ್ರಾಯಪಡುತ್ತಾರೆ.

- ಗಂಡನು ಹೆಂಡತಿಯನ್ನು ತಾನಾಗಿ ವ್ಯಭಿಚಾರಕ್ಕೆ ಒತ್ತಾಯ ಪಡಿಸುತ್ತಾ ಅವಳ ಅಭಿಮತಕ್ಕೆ ವಿರುದ್ಧವಾಗಿ ಪರಪುರುಷರ ಸಂಪರ್ಕವನ್ನು ಬಯಸುತ್ತಿದ್ದರೆ ಅದನ್ನು ಸಹಿಸಲಾರದ ಹೆಂಡತಿಯು ಅವಧಿ ಮುಗಿಯುವ ಮೊದಲೇ ಅರ್ಜಿ ಸಲ್ಲಿಸಬಹುದು.
- ಗಂಡನು ಯಾವಾಗಲೂ ಮದ್ಯಪಾನದ ದುರಭ್ಯಾಸಕ್ಕೆ ತೊಡಗಿದ್ದು ಹೆಂಡತಿಗೆ ಪ್ರಾಣಾಪಾಯವನ್ನುಂಟುಮಾಡುವಂತೆ ದೌರ್ಜನ್ಯದಿಂದ ವರ್ತಿಸುತ್ತಿದ್ದರೆ ಅದು ಸಕಾರಣವಾಗುತ್ತದೆ.
- ಗಂಡನು ಮದುವೆಯಾಗುವ ಕಾಲದಲ್ಲಿ ವೇಶ್ಯೆಯೊಬ್ಬಳನ್ನು ಹೊಂದಿದ್ದು ವಿವಾಹವಾದ ಹೆಂಡತಿಯು ಮನೆಗೆ ಬಂದಾಗಲೂ ಅವಳೊಡನೆಯೇ ವಿಶೇಷವಾಗಿ ದಾಂಪತ್ಯ ಜೀವನವನ್ನು ನಡೆಸುತ್ತಾ ಮನೆಯಲ್ಲಿ ಅವಳದೇ ಯಾಜಮಾನ್ಯವಾಗಿದ್ದು, ಹೆಂಡತಿಯು ಅವಳ ಚರಣದಾಸಿಯಾಗಿರುವಂತಹ ಪರಿಸ್ಥಿತಿಯಿದ್ದರೆ ಹೆಂಡತಿಯು ಅವಧಿಗೆ ಮುನ್ನವೇ ಅರ್ಜಿ ಸಲ್ಲಿಸಬಹುದು.
- ಗಂಡನಿಗಾಗಲಿ ಹೆಂಡತಿಗಾಗಲಿ ಅತ್ಯುಗ್ರ ಬುದ್ಧಿಕಲ್ಪವಾಗಿ ಒಬ್ಬರಿಗೊಬ್ಬರ ಸಹಬಾಳ್ವೆಯು ಅಪಾಯಕರವಾಗಿ ಸಂಭವಿಸಿದರೆ ಅದು ಸಕಾರಣವಾಗುತ್ತದೆ.
- ವಿವಾಹ ಸಮಯಕ್ಕೆ ಮೊದಲಿನಿಂದಲೂ ಹೆಂಡತಿಯು ಪರಪುರುಷನೊಡನೆ ಸಂಬಂಧ ಹೊಂದಿದ್ದು ದುರುದ್ದೇಶದಿಂದ ವಿವಾಹವಾಗಿ ಅವನ ಸಂಪತ್ತನ್ನು ಅಪಹರಿಸಿ ಅವನ ಪ್ರಾಣಹರಣ ಮಾಡುವ ಸನ್ನಾಹವಿರುವ ಸಂದರ್ಭದಲ್ಲಿ ಗಂಡನು ಅವಧಿಗೂ ಮುನ್ನ ಅರ್ಜಿ ಸಲ್ಲಿಸಬಹುದು.
- ವಿವಾಹವಾಗುವ ಮುನ್ನ ಹೆಂಡತಿಗೆ ವ್ಯಭಿಚಾರದಿಂದ ಮಕ್ಕಳಾಗಿದ್ದು ಅವೂ ಬದುಕಿರುವ ಸಂದರ್ಭದಲ್ಲಿ ಅದರಿಂದ ಗಂಡನ ಹಿತಕ್ಕೆ ದಕ್ಕೆ ಬರುವಂತಿದ್ದರೆ ಗಂಡನು ಅವಧಿಗೆ ಮುನ್ನವೇ ಅರ್ಜಿ ಸಲ್ಲಿಸಬಹುದು.
- ವಿವಾಹವಾದ ಮರುಕ್ಷಣದಲ್ಲೇ ಗಂಡನು ತನ್ನ ಹೆಂಡತಿಯ ಸೋದರಿಯರಲ್ಲಿ ಅಥವಾ ಸಂಸಾರದ ಸೇವಕರಲ್ಲಿ ಸಂಪರ್ಕವನ್ನಿಟ್ಟುಕೊಂಡಿರುವುದಾದರೆ ಅಥವಾ ಹೆಂಡತಿ ಗಂಡನ ಸಹೋದರರಲ್ಲೋ ಸೇವಕರಲ್ಲೋ ಅಕ್ರಮ ಸಂಬಂಧವನ್ನು ಹೊಂದಿದ್ದರೆ ಅದರಿಂದ ಪ್ರಾಣಾಪಾಯದ ಭೀತಿಗೆ ಕಾರಣವಿರುವುದರಿಂದ ಅವಧಿಗೆ ಮೊದಲೇ ಅರ್ಜಿ ಸಲ್ಲಿಸಲು ಅವಕಾಶವಿದೆ.
- ಇತರ ಹೆಂಗಸರೊಂದಿಗೆ ಗಂಡನ ಸ್ವೇಚ್ಛಾಚಾರದ ಜಾರತ್ವ.
- ಜಾರತ್ವ ಮಾಡುವುದು ಮತ್ತು ಇನ್ನೊಬ್ಬ ಹೆಂಗಸಿಗೋಸ್ಕರ ತನ್ನ ಹೆಂಡತಿಯ ಅಭಿತ್ಯಜನೆ ಮಾಡುವುದು ಮತ್ತು ಹೆಂಡತಿಯೊಂದಿಗೆ ಕ್ರೌರ್ಯ ಈ ಮೂರು ಸಂಗತಿಗಳು ಹೆಂಡತಿಗೆ ಅತಿರೇಕವಾದ ಕಷ್ಟ ಕೊಟ್ಟಂತಾಗುವುದರಿಂದ ಅವಧಿಗೂ ಮುನ್ನ ವಿಚ್ಛೇದನೆ ಅರ್ಜಿ ಸಲ್ಲಿಸಬಹುದು.

- ಪತಿ-ಪತ್ನಿ ಇಬ್ಬರಲ್ಲಿ ಯಾರಾದರೂ ವೈವಾಹಿಕ ಜೀವನಕ್ಕೆ ಅಸಮರ್ಥರಾಗಿದ್ದರೆ (ನಪುಂಸಕತ್ವ).

ಈ ಕಾರಣಗಳಿಗಾಗಿ ಅವಧಿಗೂ ಮುಂಚೆ ವಿಚ್ಛೇದನೆಗಾಗಿ ಅರ್ಜಿ ಸಲ್ಲಿಸಿದಾಗ, ಅಂತಹ ಅರ್ಜಿಯನ್ನು ಸ್ವೀಕರಿಸಿದ ಮೇಲೆ ವಿಚಾರಣೆ ನಡೆಸಿದಾಗ ದಾಂಪತ್ಯ ಜೀವನದಲ್ಲಿ ಅತ್ಯಂತ ಕಠಿಣ ಪ್ರಸಂಗ ಬರುವುದು ಸಹಜವೆಂದು ನಿರ್ಧಾರವಾದರೆ ವಿಚ್ಛೇದನ ಆಜ್ಞೆಯನ್ನು ನ್ಯಾಯಾಲಯವು ನೀಡಬಹುದಾಗಿದೆ.

ಹಿಂದೂ ವಿವಾಹ ಶಾಸನದ ಇಪ್ಪತ್ನಾಲ್ಕು ಹಾಗೂ ಇಪ್ಪತ್ತೈದನೆಯ ವಿಧಿಗಳು ಅನುಕ್ರಮವಾಗಿ 'ವಿಚಾರಣಾ ಕಾಲದ ಜೀವನಾಂಶ' ಮತ್ತು 'ಶಾಶ್ವತ ಜೀವನಾಂಶ'ದ ಕುರಿತು ತಿಳಿಸುತ್ತವೆ. ಇಪ್ಪತ್ನಾಲ್ಕನೆಯ ವಿಧಿ ಈ ಶಾಸನದ ರೀತ್ಯಾ ಯಾವುದೇ ವ್ಯವಹಾರವು ನ್ಯಾಯಾಲಯದ ವಿಚಾರಣೆಗೆ ಬಂದಾಗ ಅಶಕ್ತರಾದವರಿಗೆ ವ್ಯವಹಾರ ಮುಗಿಯದವರೆಗೆ ಶಕ್ತರಾದವರು ಜೀವನಾಂಶವನ್ನು ಮತ್ತು ನ್ಯಾಯಾಲಯದಲ್ಲಿ ನಡೆಯಬೇಕಾದ ವ್ಯವಹಾರಕ್ಕೆ ವೆಚ್ಚವನ್ನು ಕೊಡಬೇಕೆಂದು ಈ ವಿಧಿಯನ್ನು ರಚಿಸಿದೆ. ಶಾಸನರೀತ್ಯಾ ಹಣದ ಕೊರತೆ ಗಂಡನಿಗಿರಬಹುದು ಅಥವಾ ಹೆಂಡತಿಗಿರಬಹುದು. ಈ ವಿಧಿಯನ್ವಯ ಜೀವನಾಂಶವನ್ನು ಹಾಗೂ ವ್ಯವಹಾರಕ್ಕೆ ಬೇಕಾಗುವ ಮೊಬಲಗನ್ನು ಕೇಳಬಹುದು. ಯಾವುದೇ ವ್ಯವಹಾರವು ನ್ಯಾಯಾಲಯದ ವಿಚಾರಣೆಯಲ್ಲಿದ್ದರೆ ತನ್ನ ಜೀವನಕ್ಕೂ ಮತ್ತು ನ್ಯಾಯಾಲಯದ ವ್ಯವಹಾರಕ್ಕೂ ವೆಚ್ಚ ಮಾಡಲು ಸೌಲಭ್ಯವಿಲ್ಲದೆ ಗಂಡನಿಗಾಗಲೀ ಅಥವಾ ಹೆಂಡತಿಗಾಗಲೀ ವಾದಿ ಮತ್ತು ಪ್ರತಿವಾದಿಗಳ ಉತ್ಪನ್ನವನ್ನು ಪರಿಶೀಲಿಸಿ ವ್ಯವಹಾರ ನಡೆಯುವ ಕಾಲದಲ್ಲಿ ಪ್ರತಿವಾದಿಯ ಮಾಸಿಕ ಪರಿಹಾರವನ್ನು ಅಂದರೆ ವೆಚ್ಚವನ್ನು ಕೊಡಬೇಕೆಂದು ವಾದಿಯು ಸಲ್ಲಿಸುವ ಅರ್ಜಿಯ ಮೇಲೆ ನ್ಯಾಯಾಲಯವು ಸೂಕ್ತ ತೋರಿದ ರೀತಿಯಲ್ಲಿ ಆಜ್ಞೆ ಮಾಡಬಹುದು.

ವಾದಿಯು ಶಾಸನರೀತ್ಯಾ ವಿಚ್ಛೇದನೆ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿದರೆ ಅವರ ವ್ಯವಹಾರ ನಡೆಯುವ ಕಾಲದಲ್ಲಿ ಪ್ರತಿವಾದಿಯು ತನ್ನ ಜೀವನಾಂಶಕ್ಕೆ ಯಾವಾಗಬೇಕಾದರೋ ಅರ್ಜಿ ಸಲ್ಲಿಸಬಹುದು. ಅಂತಹ ಅರ್ಜಿ ಬಂದಾಗ ನ್ಯಾಯಾಲಯವು ಮೊದಲು ವಾದಿ ಪ್ರತಿವಾದಿಗಳ ಉತ್ಪನ್ನವೇನು ಎಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಸೂಕ್ತವಾದ ವೆಚ್ಚವನ್ನು ಪ್ರತಿವಾದಿಯು ಪ್ರತಿ ತಿಂಗಳೂ ಪಾವತಿ ಮಾಡಬೇಕೆಂದು ಆಜ್ಞೆ ಮಾಡಬಹುದು. ಒಂದು ವೇಳೆ ಪ್ರತಿವಾದಿಯೂ ಹಣದ ತೊಂದರೆಗೆ ಒಳಗಾಗಿದ್ದರೆ ವಾದಿಯೂ, ಪ್ರತಿವಾದಿಗೆ ಜೀವನಾಂಶ ಕೊಡುವಂತೆ ಆಜ್ಞೆ ಮಾಡಬೇಕೆಂದು ನ್ಯಾಯಾಲಯಗಳು ಸ್ಪಷ್ಟ ಅಭಿಪ್ರಾಯಪಟ್ಟಿವೆ. ಜೀವನಾಂಶವು ಮೂಲ ವ್ಯವಹಾರದ ಅರ್ಜಿ ಸಲ್ಲಿಸಿದ ಸಂಗತಿಯು ಖಚಿತವಾಗಿ ಪ್ರತಿವಾದಿಗೆ ತಿಳಿದ ದಿನದಿಂದ ವ್ಯವಹಾರವು ಅಂತಿಮವಾಗಿ ಮುಕ್ತಾಯವಾಗುವವರೆಗೆ ಪಾವತಿ ಮಾಡಬೇಕಾಗುತ್ತದೆ. ಈ ವಿಧಿಯಂತೆ ಪ್ರತಿವಾದಿಯು ವಾದಿಗೆ ನ್ಯಾಯಾಲಯದ ಆಜ್ಞೆಯಂತೆ ಜೀವನಾಶವನ್ನು ಪಾವತಿ ಮಾಡುತ್ತಾ ಬರಬೇಕು. ನ್ಯಾಯಾಲಯದ ಆಜ್ಞೆಯನ್ನು ಪ್ರತಿವಾದಿಯು ಪಾಲಿಸದೇ ಹೋದರೆ ಸಾರ್ವತ್ರಿಕ ಶಾಸನರೀತ್ಯಾ ಜಾರಿ ಕ್ರಮ ನಡೆಸಿ ಪ್ರತಿವಾದಿಯು ಆಸ್ತಿಪಾಸ್ತಿಗಳನ್ನು ಜಪ್ತಿ ಮಾಡಿಸಿ ಹಣ ವಸೂಲು ಮಾಡಲು ನ್ಯಾಯಾಲಯಕ್ಕೆ ಅವಕಾಶವಿದೆ. ಈ ವಿಧಿಯಂತೆ ಆಜ್ಞೆಯಾದ ಮೇಲೆ

ಜೀವನಾಂಶವನ್ನೂ ಪಾವತಿ ಮಾಡದೇ ಪ್ರತಿವಾದಿಯು ಮೂಲ ವ್ಯವಹಾರವು ತೀವ್ರ ಮುಗಿಯುವಂತೆ ನ್ಯಾಯಾಲಯದಲ್ಲಿ ಪ್ರಯತ್ನ ಮಾಡಿದರೆ ಈ ಹಣ ಪಾವತಿಯಾಗುವವರೆಗೆ ಮೂಲ ವ್ಯವಹಾರ ನಡೆಯದಂತೆ ಆಜ್ಞೆ ನೀಡಬೇಕೆಂದು ವಾದಿಯು ಅರ್ಜಿ ಸಲ್ಲಿಸಬಹುದು. ಆದರಂತೆ ಮೂಲ ವ್ಯವಹಾರವು ನಡೆಯದಂತೆ ತಡೆಯಾಜ್ಞೆ ನೀಡಿದರೆ ಅದು ಶಾಸನಬದ್ಧ ಆಜ್ಞೆಯಾಗುತ್ತದೆ.

ಪ್ರತಿವಾದಿಯು ವಾದಿಗೆ ಕೊಡಬೇಕಾದ ಜೀವನಾಂಶವನ್ನು ನಿರ್ಧರಿಸುವಾಗ ನ್ಯಾಯಾಲಯವು ವಾದಿ-ಪ್ರತಿವಾದಿಗಳು ಉತ್ಪನ್ನ, ಸಮಾಜದಲ್ಲಿ ಅವರಿಗಿರುವ ಅಂತಸ್ತು ಮುಂತಾದವುಗಳನ್ನು ಮೂಲ ಆಧಾರವಾಗಿಟ್ಟುಕೊಂಡು ಈ ಸಮಸ್ಯೆಯನ್ನು ಬಗೆಹರಿಸಬೇಕಾಗುತ್ತದೆ. ವಾದಿಗೆ ಯಾವುದೇ ಉತ್ಪನ್ನವಿಲ್ಲದ ಕಾರಣದಿಂದ ವ್ಯವಹಾರ ನಡೆಯುವ ಕಾಲದಲ್ಲಿ ಜೀವನ ಮಾಡುವುದಾಗಲಿ ವ್ಯವಹಾರ ನಡೆಸುವುದಾಗಲೀ ದುಸ್ತರವೆಂದು ನ್ಯಾಯಾಲಯಕ್ಕೆ ಖಚಿತವಾದಾಗ ವಾದಿಯ ಅವಶ್ಯಕತೆಗಳನ್ನು ಇರಬೇಕಾದ ಅನುಕೂಲತೆಗಳು, ಸೌಲಭ್ಯಗಳು ಮುಂತಾದ ಅಂಶಗಳನ್ನು ಗಮನಿಸಿ ಕೊಡಬೇಕಾದ ಮೊತ್ತವನ್ನು ನಿಗದಿ ಮಾಡಬೇಕಾಗುತ್ತದೆ. ವಾದಿಯು ಹೆಂಡತಿಯಾಗಿದ್ದು ಆಕೆಯ ತಂದೆಯ ಮನೆಯಲ್ಲಿದ್ದು ಅಲ್ಲಿನ ಉತ್ಪನ್ನದಿಂದ ಜೀವನ ನಡೆಸಬಹುದೆಂದೂ ವ್ಯವಹಾರಕ್ಕೆ ವೆಚ್ಚ ಮಾಡಬಹುದೆಂದೂ ಗಂಡನು ಈ ವಿಧಿಯ ಅರ್ಜಿಗೆ ವಿರೋಧವನ್ನು ಸೂಚಿಸಲು ಅವಕಾಶವಿಲ್ಲ. ಮೇಲೆ ಹೇಳಿದ ಅಂಶಗಳ ಜೊತೆಗೆ ಈ ವಿಧಿಯಂತೆ ಆಜ್ಞೆ ಮಾಡಬೇಕಾದ ಸಮಯದಲ್ಲಿ ವಾದಿಯು ನ್ಯಾಯಾಲಯಕ್ಕೆ ಬರಬೇಕಾದಾಗ, ಆಗಬಹುದಾದ ದಾರಿಯ ವೆಚ್ಚ, ವ್ಯವಹಾರಕ್ಕಾಗಿ ನ್ಯಾಯಾಲಯವಿರುವ ಪ್ರದೇಶದಲ್ಲಿ ಉಳಿಯಬೇಕಾದರೆ ಅದಕ್ಕಾಗುವ ವೆಚ್ಚ ಮತ್ತು ಆಕೆಯ ಪರವಾದ ನ್ಯಾಯವಾದಿಗಳಿಗೆ ಕೊಡಬೇಕಾದ ಶುಲ್ಕ ನ್ಯಾಯಾಲಯಕ್ಕೆ ಸಲ್ಲಿಸಬೇಕಾದ ತೆರಿಗೆ ಮುಂತಾದ ವೆಚ್ಚಗಳನ್ನು ಗಣನೆಗೆ ತೆಗೆದುಕೊಳ್ಳಬೇಕು. ಅದರ ಪ್ರಮಾಣವನ್ನು ಅನುಸರಿಸಿ ವ್ಯವಹಾರದ ವೆಚ್ಚವನ್ನು ನಿಗದಿ ಮಾಡಬೇಕು. ಹಣ ಕೊಡದೇ ತಪ್ಪಿಸಿಕೊಳ್ಳಲು ಪ್ರತಿವಾದಿಯು ತಾನು ನಿರ್ಗತಿಕನೆಂದು ಪ್ರತಿಪಾದಿಸುವಂತಿಲ್ಲ.

ಹಿಂದಿನ ವಿಧಿಯ ಪ್ರಕಾರ ನ್ಯಾಯಾಲಯದಲ್ಲಿ ಮುಂದೆ ಶಾಸನರೀತ್ಯಾ ಪರಿಹಾರಕ್ಕಾಗಿ ಸಲ್ಲಿಸಿದ ಅರ್ಜಿಯ ವಿಚಾರಣೆಯ ವ್ಯವಹಾರವು ನಡೆಯುವಾಗ ಅಶಕ್ತರಿಗಾಗಿ ಶಕ್ತರಾದವರು ಕೊಡಬೇಕಾದ ತಾತ್ಕಾಲಿಕ ಜೀವನಾಂಶ ಮತ್ತು ವ್ಯವಹಾರದ ವೆಚ್ಚ ಇವುಗಳನ್ನು ವಿವರಿಸಲಾಯಿತು. ನ್ಯಾಯಾಲಯದಲ್ಲಿ ತೀರ್ಪು ನೀಡಿದ ಮೇಲೆ ಅಶಕ್ತರಾದವರಿಗೆ ಶಕ್ತರಾದವರು ಜೀವನ ಪರ್ಯಂತ ಜೀವನಾಂಶವನ್ನು ಪಡೆಯುವುದರ ಕುರಿತು ಇಪ್ಪತ್ತೈದನೆಯ ವಿಧಿಯು ವಿವರಿಸುತ್ತದೆ.

೧. ಈ ಅಧಿನಿಯಮದ ಮೇರೆಗೆ ನ್ಯಾಯಾಧಿಕಾರವನ್ನು ಚಲಾಯಿಸುವ ಯಾವುದೇ ನ್ಯಾಯಾಲಯವು, ಡಿಕ್ರಿ ಮಾಡುವ ಕಾಲದಲ್ಲಿ ಅಥವಾ ಅದರ ಬಳಿಕ ಎಂದಾದರೂ ಅದೇ ಉದ್ದೇಶಕ್ಕಾಗಿ ಹೆಂಡತಿ ಅಥವಾ ಸಂದರ್ಭಾನುಸಾರ ಗಂಡನು ಮಾಡಿದ ಅರ್ಜಿಯ ಮೇರೆಗೆ ಎದುರು ಪಕ್ಷದ ಆದಾಯ ಹಾಗೂ ಅರ್ಜಿದಾರ ಪಕ್ಷದ ಆಸ್ತಿಯು ಪಕ್ಷಗಾರರ ವರ್ತನೆ ಹಾಗೂ ವ್ಯವಹರಣೆಯ ಇತರ ಸಂಗತಿಗಳನ್ನು ಅನುಲಕ್ಷಿಸಿ

ಎದುರು ಪಕ್ಷವು ಅರ್ಜಿದಾರ ಪಕ್ಷಕ್ಕೆ ಅವನ ಅಥವಾ ಅವಳ ಪೋಷಣೆ ಹಾಗೂ ಸಹಾಯಕ್ಕಾಗಿ ನ್ಯಾಯಾಲಯಕ್ಕೆ ಯುಕ್ತವೆಂದು ತೋರುವ ಒಟ್ಟು ಮೊಬಲಗು ಅಥವಾ ಅರ್ಜಿದಾರ ಪಕ್ಷದ ಜೀವನಾವಧಿ ಯನ್ನು ಮೀರಿದ ಮಾಸಿಕ ಇಲ್ಲವೆ ನಿಯತಕಾಲಿಕವಾದ ಮೊಬಲಗನ್ನು ಸಲ್ಲಿಸಬೇಕೆಂದು ಆಜ್ಞೆ ಮಾಡಬಹುದು ಹಾಗೂ ಅಗತ್ಯವಿದ್ದರೆ ಎದುರು ಪಕ್ಷದ ಸ್ಥಾವರ ಆಸ್ತಿಯ ಮೇಲೆ ಅಂತಹ ಹಣದ ಹೊಣೆ ಇಟ್ಟು ಭದ್ರಪಡಿಸಬಹುದು.

೨. ಮೇಲ್ಕಂಡ ಆಜ್ಞೆ ನೀಡಿದ ನಂತರ ಉಭಯತರ ಪೈಕಿ ಯಾರಾದರೊಬ್ಬರ ಪರಿಸ್ಥಿತಿಯಲ್ಲಿ ಯಾವುದೇ ರೀತಿಯ ಬದಲಾವಣೆಯಾಗಿರುವುದು. ನ್ಯಾಯಾಲಯಕ್ಕೆ ತೋರಿದರೆ ವಾದಿಯ ಅಥವಾ ಪ್ರತಿವಾದಿಯ ಕೋರಿಕೆಯ ಮೇಲೆ ಹಿಂದಿನ ಆಜ್ಞೆಯನ್ನು ನ್ಯಾಯಾಲಯವು ಸೂಕ್ತವಾದ ರೀತಿಯಲ್ಲಿ ಬದಲಾಯಿಸುವುದಕ್ಕೂ, ಪರಿವರ್ತನೆಗೊಳಿಸುವುದಕ್ಕೂ ಅಥವಾ ಪೂರ್ಣವಾಗಿ ರದ್ದುಪಡಿಸುವುದಕ್ಕೂ ಅವಕಾಶವಿದೆ.

೩. ಈ ವಿಧಿಯಂತೆ ಜೀವನಾಂಶ ಪಡೆಯಲು ನ್ಯಾಯಾಲಯದ ಆಜ್ಞೆಯನ್ನು ಪಡೆದವರು ಪುನಃ ವಿವಾಹವಾಗಿರುವರೆಂಬುದು ನ್ಯಾಯಾಲಯಕ್ಕೆ ಖಚಿತವಾದರೆ ಅಥವಾ ಅವರು ಹೆಂಡತಿಯಾಗಿದ್ದರೆ ಆಕೆಯ ಶೀಲವಂತಳಾಗಿಲ್ಲವೆಂಬುದು ವಿರುದ್ಧ ಪಕ್ಷದ ಅಪೇಕ್ಷೆಯ ಮೇರೆಗೆ ಅಂತಹ ಆದೇಶವನ್ನು ತನಗೆ ಯುಕ್ತವೆಂದು ತೋರಿದ ರೀತಿಯಲ್ಲಿ ಬದಲಿಸಬಹುದು, ಮಾರ್ಪಡಿಸಬಹುದು, ರದ್ದು ಮಾಡಬಹುದು.

ಜೀವನಾಂಶವು ಆ ವ್ಯಕ್ತಿಯ ಜೀವಮಾನದವರೆಗೆ ಮಾತ್ರ ಸಲ್ಲುತ್ತದೆ ಅಥವಾ ತಾನಾಗಿ ಶಾಸನವನ್ನು ಉಲ್ಲಂಘಿಸಿದರೆ ಆಗ ಪ್ರತಿವಾದಿಯು ನ್ಯಾಯಾಲಯದ ಆಜ್ಞೆಯನ್ನು ಪಡೆದು ಜೀವನಾಂಶವನ್ನು ರದ್ದುಪಡಿಸ ಬಹುದು. ಜೀವನಾಂಶವನ್ನು ಪಡೆಯುತ್ತಿದ್ದವರೂ ಬದುಕಿದ್ದು ಜೀವನಾಂಶ ಕೊಡುತ್ತಿದ್ದವರೂ ಮೃತರಾದರೆ ಅವರ ಆಸ್ತಿಯನ್ನು ಅನುಭವಿಸುವ ಉತ್ತರಾಧಿಕಾರಿಗಳು ಆ ಮೊಬಲಗನ್ನು ಪಡೆಯುವವರ ಜೀವನಾವಧಿಯ ವರೆಗೂ ಪಾವತಿ ಮಾಡುತ್ತಾ ಬರಬೇಕು. ವಿವಾಹ ವಿಚ್ಛೇದನವನ್ನು ಹೊಂದಿದ ಹೆಂಡತಿಯು ಜೀವನಾಂಶ ವನ್ನು ಪಡೆಯುತ್ತಿದ್ದರೆ ಆಕೆ ಮತ್ತೊಬ್ಬ ಪುರುಷನನ್ನು ಪುನಃ ವಿವಾಹವಾದರೆ ಆಕೆ ತನ್ನ ಮೊದಲನೇ ಗಂಡನಿಂದ ಜೀವನಾಂಶ ಪಡೆಯಲು ಅರ್ಹಳಾಗುವುದಿಲ್ಲ.

ಈ ಶಾಸನರೀತ್ಯಾ ಪರಿಹಾರವನ್ನು ಪಡೆಯುವ ಕಾಲದಲ್ಲೇ ಜೀವನಾಂಶಕ್ಕೆ ಅರ್ಜಿಯನ್ನು ಈ ವಿಧಿಯ ಅನುಸಾರ ಸಲ್ಲಿಸಬಹುದು. ಹಾಗೆ ಅರ್ಜಿ ಸಲ್ಲಿಸದೇ ಹೋದರೆ ಪರಿಹಾರದ ಆಜ್ಞೆ ದೊರೆತ ಮೇಲಾದರೂ ಅರ್ಜಿಯನ್ನು ಸಲ್ಲಿಸಬಹುದು. ವಿಧಿಯಲ್ಲಿ ಸೂಚಿಸಿರುವಂತೆ ಜೀವನ ಪರ್ಯಂತ ಎಷ್ಟು ಅರ್ಜಿಗಳನ್ನಾದರೂ ಸಲ್ಲಿಸಲು ಶಾಸನರೀತ್ಯಾ ಅವಕಾಶವಿರುತ್ತದೆ. ಪರಿಹಾರದ ಆಜ್ಞೆಯಾಗುವಾಗ ಸಲ್ಲಿಸಿದ್ದ ಅರ್ಜಿಯು ಒಂದು ವೇಳೆ ಯಾವುದಾದರೂ ಕಾರಣದಿಂದ ಅಂದರೆ ವಿಧಿಯ ನಿಯಮಗಳಿಗೆ ಒಳಪಡದ ಕಾರಣಗಳಿದ್ದರೆ ಅಂತಹ ಅರ್ಜಿ ವಜಾ ಆಗಬಹುದು. ಮೂಲ ಪರಿಹಾರ ದೊರೆತ ಮೇಲೆ ಮತ್ತೆ ಜೀವನಾಂಶಕ್ಕಾಗಿ ಅರ್ಜಿ ಸಲ್ಲಿಸಲು ಅವಕಾಶವಿದೆ. ಆದರೆ ಮೊದಲು ಅರ್ಜಿ ಸಲ್ಲಿಸಿದಾಗ ಇದ್ದ

ಕಾರಣಗಳಲ್ಲೂ, ಪರಿಸ್ಥಿತಿಯಲ್ಲೂ ಅವರ ಜೀವನದಲ್ಲಿ ಬದಲಾವಣೆಗಳಾಗಿವೆಯೆಂಬುದನ್ನು ಆಧಾರಪೂರ್ವಕವಾಗಿ ಸಿದ್ಧಪಡಿಸಿದರೆ ಮಾತ್ರ ಜೀವನಾಂಶದ ಅರ್ಜಿಯನ್ನು ಆಧರಿಸಿ ಜೀವನಾಂಶ ನೀಡಬೇಕೆಂಬ ಆಜ್ಞೆ ನೀಡಬಹುದು. ಅಂದರೆ ಮೂಲ ಪರಿಹಾರವನ್ನು ಪಡೆಯುವಾಗ ಹೆಂಡತಿಯ ಉತ್ಪನ್ನವೇ ಗಂಡನ ಉತ್ಪನ್ನಕ್ಕಿಂತ ಹೆಚ್ಚಾಗಿದ್ದು ಅದರಿಂದ ಅವಳು ಜೀವನ ನಿರ್ವಹಿಸಲು ಸಾಧ್ಯವಿದೆಯೆಂದು ಅರ್ಜಿಯು ವಜಾ ಆಗಿದ್ದರೆ ಮತ್ತೆ ಅರ್ಜಿ ಸಲ್ಲಿಸುವಾಗ ಇಂತಹ ಪರಿಸ್ಥಿತಿಯಲ್ಲಿ ಬದಲಾವಣೆಯಾಗಿ ಹೆಂಡತಿಯ ಉತ್ಪನ್ನವು ಜೀವನ ನಡೆಸಲು ಸಾಧ್ಯವಿಲ್ಲವೆಂದು ಗಂಡನು ತನ್ನ ಉತ್ಪನ್ನದಿಂದ ಹೆಂಡತಿಗೆ ಜೀವನಾಂಶವನ್ನು ಕೊಡಬೇಕಾದದ್ದು ಸೂಕ್ತವೆಂದು ನ್ಯಾಯಾಲಯಕ್ಕೆ ತೋರಿ ಬಂದರೆ ಮಾತ್ರ ಮತ್ತೆ ಸಲ್ಲಿಸಿದ ಅರ್ಜಿಯನ್ನು ಪರಿಶೀಲಿಸಿ ಆಜ್ಞೆ ಮಾಡಬಹುದು. ಹಾಗಲ್ಲದೆ ಮೊದಲನೆ ಪರಿಸ್ಥಿತಿಯಲ್ಲಿ ಯಾವುದೇ ಬದಲಾವಣೆಯೂ ಆಗದಿದ್ದರೂ ಸಹ ಅಲ್ಲಿ ಸಲ್ಲಿಸುವ ಅವಕಾಶವಿದೆಯೆಂದು ಮತ್ತೆ ಅದೇ ಕಾರಣಗಳನ್ನು ನಮೂದಿಸಿ ಜೀವನಾಂಶ ಕೋರಿದರೆ ಅದು ವಜಾ ಆಗುತ್ತದೆ.

ಜೀವನಾಂಶದ ಮೊಬಲಗನ್ನು ನಿಗದಿ ಮಾಡುವಾಗ ನ್ಯಾಯಾಲಯವು ನ್ಯಾಯಬದ್ಧವಾಗಿ ವಾದಿಗೆ ಎಷ್ಟು ಬೇಕಾಗಬಹುದು ಮತ್ತು ಪ್ರತಿವಾದಿ ಎಷ್ಟು ಕೊಡಬಹುದು ಎಂಬುದನ್ನು ಪರಿಗಣಿಸುತ್ತದೆ. ಅಂದರೆ ದಂಪತಿಗಳು ಒಟ್ಟಾಗಿದ್ದಾಗ ಅವರ ಜೀವನದ ಮಟ್ಟ ಅವರ ಉತ್ಪನ್ನ ಪರಿಹಾರವನ್ನು ಪಡೆಯುವವರ ಜೀವನಕ್ಕೆ ಅತ್ಯವಶ್ಯಕವಾಗಿ ಬೇಕಾಗುವ ಅವಶ್ಯಕತೆಗಳು, ಅವರ ವಯಸ್ಸು ಮತ್ತು ಆರೋಗ್ಯ ರಕ್ಷಣೆಗೆ ತಗಲಬಹುದಾದ ಸಾಮಾನ್ಯ ವೆಚ್ಚ ಮುಂತಾದುವನ್ನೆಲ್ಲಾ ಪರಿಗಣಿಸಬೇಕು. ಅದಲ್ಲದೆ ಗಂಡ-ಹೆಂಡತಿಯರ ಉತ್ಪನ್ನವನ್ನು ಕೂಡಿಸಿ ಸಮರ್ಥ ಭಾಗ ಮಾಡುವುದು ಸರಿಯಲ್ಲವೆನ್ನುವುದು. ಗಂಡನು ಮುಂದೆ ವಿವಾಹವಾದಾಗ ಹೆಚ್ಚು ವೆಚ್ಚವಾಗುತ್ತದೆಯೆಂದು ಈಗಲೇ ಕಡಿಮೆ ಮಾಡುವಂತೆಯೂ ಇಲ್ಲ. ಏಕೆಂದರೆ ಅಂತಹ ಪರಿಸ್ಥಿತಿಯಲ್ಲಿ ಬದಲಾವಣೆ ಮಾಡಿಸಿಕೊಳ್ಳಲು ಅವಕಾಶವಿರುವುದಷ್ಟೇ ಹೆಂಡತಿಯ ಜೀವನದ ನಿತ್ಯ ಅವಶ್ಯಕತೆಯನ್ನು ಪರಿಶೀಲಿಸಬೇಕೇ ಹೊರತು ಅವಳು ಮುಂದೆ ವಿದ್ಯಾಭ್ಯಾಸ ಮಾಡಬೇಕೆಂದು ಅದಕ್ಕೆ ಹೆಚ್ಚು ವೆಚ್ಚವಾಗುವುದರಿಂದ ಅದನ್ನು ಗಮನಿಸಬೇಕೆನ್ನುವುದು ಶಾಸನೋಕ್ತವಾಗುವುದಿಲ್ಲ ಮತ್ತು ಹೆಂಡತಿಗೆ ಆಕೆಯ ತಂದೆ-ತಾಯಿಯರಿಂದ ಸಹಾಯ ದೊರೆಯುವುದೆಂದು ಅದನ್ನು ಗಮನಿಸಬೇಕೆಂದೂ ಗಂಡನು ಹೇಳುವಂತಿಲ್ಲ. ಹೆಂಡತಿಯ ಸ್ವಂತ ಉತ್ಪನ್ನವನ್ನು ಮಾತ್ರವೇ ಗಮನಿಸಿ ಅದು ಅವಳ ಜೀವನಕ್ಕೆ ಸಾಲದೆಂಬ ಅಭಿಪ್ರಾಯಕ್ಕೆ ಬಂದರೆ ಮಾತ್ರ ಗಂಡನು ತನ್ನ ಉತ್ಪನ್ನದಿಂದ ಜೀವನಾಂಶ ನೀಡಬೇಕಾಗುತ್ತದೆ.

'ಹಿಂದೂ ವಿವಾಹ ಶಾಸನದ' ಇಪ್ಪತ್ತಾರನೇ ವಿಧಿಯು ಮಕ್ಕಳ ಅಭಿರಕ್ಷೆಗೆ ಸಂಬಂಧಿಸಿದುದಾಗಿದೆ. ಈ ಅಧಿನಿಯಮದ ಮೇರೆಗೆ ಮಾಡಲಾದ ಯಾವುದೇ ವ್ಯವಹರಣೆಯಲ್ಲಿ ನ್ಯಾಯಾಲಯವು ಅಲ್ಪವಯಿ ಮಕ್ಕಳ ಅಭಿರಕ್ಷೆ, ಪೋಷಣೆ ಮತ್ತು ವಿದ್ಯಾಭ್ಯಾಸ ಇವುಗಳ ಸಂಬಂಧದಲ್ಲಿ ಸಾಧ್ಯವಿರುವಷ್ಟರಮಟ್ಟಿಗೆ ಅವರ ಇಚ್ಛೆಗೆ ಅನುಗುಣವಾಗಿ ಕಾಲಕಾಲಕ್ಕೆ ಅಂತರಿಮ ಆದೇಶ ಮಾಡಬಹುದು. ಆ ಆದೇಶದಲ್ಲಿ ಉಪಬಂಧ ಮಾಡಬಹುದು ಮತ್ತು ಡಿಕ್ರಿಯ ಬಳಿಕ ಆ ಉದ್ದೇಶಕ್ಕಾಗಿ ಮಾಡಲಾದ ಅರ್ಜಿಯ ಮೇಲೆ

ಆದೇಶದಲ್ಲಿ ಅಥವಾ ವ್ಯವಹರಣೆಯು ನಡೆಯುತ್ತಿರುವಾಗ ಅಂತರಿಮಗಾಗಿ ಅಂತಹ ಮಕ್ಕಳ ಅಭಿರಕ್ಷೆ, ಪೋಷಣೆ ಹಾಗೂ ವಿದ್ಯಾಭ್ಯಾಸದ ಸಂಬಂಧದಲ್ಲಿ ಮಾಡಬಹುದಾದ ಆದೇಶಗಳನ್ನು ಕಾಲಕಾಲಕ್ಕೆ ಮಾಡಬಹುದು ಹಾಗೂ ಮೊದಲು ಮಾಡಿದ ಆದೇಶಗಳನ್ನೂ ಉಪಬಂಧಗಳನ್ನೂ ಕಾಲಕಾಲಕ್ಕೆ ರದ್ದು ಮಾಡಬಹುದು ಅಥವಾ ಬದಲಿಸಬಹುದಾಗಿದೆ.

ಈ ವಿಧಿಯಂತೆ ಮೂಲ ವ್ಯವಹಾರವು ನಡೆಯುತ್ತಿರುವಾಗ ಅಂದರೆ ಅದು ಅಂತಿಮವಾಗಿ ತೀರ್ಮಾನವಾಗದೇ ಇರುವಾಗ ಅಪ್ರಾಪ್ತ ವಯಸ್ಕರಾದ ಮಕ್ಕಳ ರಕ್ಷಣೆಗಾಗಿ ತಾತ್ಕಾಲಿಕ ನಿರ್ದೇಶನವನ್ನು ನೀಡಬಹುದು. ಮೂಲ ವ್ಯವಹಾರ ಮುಗಿದ ನಂತರವು ಈ ನಿರ್ದೇಶನ ನೀಡುವ ಅವಕಾಶ ನ್ಯಾಯಾಲಯಕ್ಕಿದೆ. ಸಾಧ್ಯವಾದಮಟ್ಟಿಗೆ ಅಂತಹ ಮಕ್ಕಳ ಮನೋಗತವನ್ನು ಅರಿತು ಅವರು ಯಾರ ಬಳಿಯಿರುತ್ತಾರೆ, ಯಾವ ರೀತಿ ರಕ್ಷಣೆ ಅಪೇಕ್ಷಿಸುತ್ತಾರೆ ಎಂಬುದನ್ನು ಗಮನಿಸಿ ನಿರ್ದೇಶನ ನೀಡಬೇಕು. ಮಕ್ಕಳ ಭವಿಷ್ಯ ರಕ್ಷಣೆಯನ್ನು ಪ್ರಧಾನ ಸಂಗತಿಯನ್ನಾಗಿಟ್ಟುಕೊಂಡು ನಿರ್ದೇಶನ ನೀಡಬೇಕು. ಅಂತಹ ನಿರ್ದೇಶನವನ್ನು ಒಮ್ಮೆ ಕೊಟ್ಟ ನಂತರ ಬದಲಾವಣೆಯಾದ ಪರಿಸ್ಥಿತಿಗಳನ್ನು ಗಮನಿಸಿ ಅದನ್ನು ಬದಲಾಯಿಸಲು ನ್ಯಾಯಾಲಯಕ್ಕೆ ಅವಕಾಶ ಮಾಡಿ ಕೊಡಲಾಗಿದೆ. ದಂಪತಿಗಳಲ್ಲಿ ಮಕ್ಕಳ ಹಿತವನ್ನು ಅಪೇಕ್ಷಿಸಿ ಯಾರೂ ಬೇಕಾದರೂ ಅಂತಹ ನಿರ್ದೇಶನಕ್ಕಾಗಿ ಅರ್ಜಿ ಸಲ್ಲಿಸಬಹುದು. ಒಂದು ಬಾರಿ ಮೂಲ ಪರಿಹಾರದ ಅರ್ಜಿಯನ್ನು ನ್ಯಾಯಾಲಯವು ತಿರಸ್ಕರಿಸಿದರೆ ನಂತರ ಮಕ್ಕಳ ಹಿತರಕ್ಷಣೆಯ ನಿರ್ದೇಶನವನ್ನು ನೀಡಲು ಅಧಿಕಾರವಿಲ್ಲ. ಆದರೆ ನ್ಯಾಯಾಲಯವು ಮಕ್ಕಳು ಯಾರ ವಶದಲ್ಲಿರಬೇಕೆಂಬುದನ್ನು ಮಕ್ಕಳ ಅಭಿಮತವನ್ನು ತಿಳಿದು ನಿಶ್ಚಯಿಸಬೇಕು. ಇದಲ್ಲದೇ ತಂದೆ ತಾಯಿಯರ ವರ್ತನೆ ನಡವಳಿಕೆಗಳ ಆಧಾರದ ಮೇಲೆಯು ಮಕ್ಕಳು ಯಾರ ವಶದಲ್ಲಿರಬೇಕು ಎಂಬುದನ್ನು ನಿರ್ಧರಿಸುತ್ತದೆ. ಮಕ್ಕಳು ತಾಯಿಯ ವಶದಲ್ಲಿರಲು ನಿರ್ದೇಶನ ನೀಡಿದರೆ ತಾಯಿಗೆ ಕೊಡುವ ಜೀವನಾಂಶದ ಜೊತೆಗೆ ತಂದೆಯು ಮಕ್ಕಳ ಪೋಷಣೆಯ ವೆಚ್ಚವನ್ನು ಪಾವತಿ ಮಾಡುವಂತೆ ನ್ಯಾಯಾಲಯವು ನಿರ್ದೇಶನ ನೀಡಬೇಕಾಗುತ್ತದೆ.

• • •

## ಅಧ್ಯಾಯ ೬

## ಕೆಲವು ವಿಚ್ಛೇದನಾ ಪ್ರಕರಣಗಳ ಪರಿಶೀಲನೆ

**ತ**ಮ್ಮ ಮೇಲಾಗುವ ಶೋಷಣೆಗಳಿಂದ ಬೇಸತ್ತ ಮಹಿಳೆಯರಲ್ಲಿ ಇಂದು ಜಾಗೃತಿ ಮೂಡುತ್ತಿದೆ. ವೈವಾಹಿತ ಜೀವನದಲ್ಲಿ ಅನುಭವಿಸುತ್ತಿರುವ ಕಿರುಕುಳ ಹಿಂಸೆಗಳಿಂದ ಮುಕ್ತಿ ಪಡೆಯಲು ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ವಿವಾಹ ಬಂಧನದಿಂದ ಹೊರಬರಲು ಬಯಸುತ್ತಿರುವರು. ಹೀಗೆ ವಿಚ್ಛೇದನೆ ಪ್ರಕ್ರಿಯೆಯಲ್ಲಿ ತೊಡಗಿಕೊಂಡಿರುವಂತಹ ಕೆಲವು ಮಹಿಳೆಯರ ಅನುಭವ ಕಥನವನ್ನು ಹಂಚಿಕೊಳ್ಳ ಬಯಸುವೆ.

**ಪ್ರಕರಣ-೧**

೨೦ ವರ್ಷದ ಜಾನಕಿಯು ವಿಚ್ಛೇದನೆಗಾಗಿ ಕಾಯುತ್ತಿರುವಂತಹ ಮಹಿಳೆ. ಇವರು ೧೦ನೇ ತರಗತಿಯವರೆಗೆ ಓದಿರುವರು. ಜಾನಕಿಯ ವಿವಾಹವು ೨೮ ವರ್ಷದ ವಿರುಪಾಕ್ಷ ಎಂಬುವವರೊಂದಿಗೆ ನೆರವೇರಿದೆ. ಇವರ ವಿವಾಹವಾಗಿ ಎರಡು ವರ್ಷ ಕಳೆದಿದೆ. ಆರ್ಥಿಕವಾಗಿ ಸ್ಥಿತಿವಂತರಲ್ಲದ ಜಾನಕಿಯ ತಂದೆ-ತಾಯಿಗಳು ತಮಗಿಂತ ಆರ್ಥಿಕವಾಗಿ ಸ್ಥಿತಿವಂತರಿರುವರೆನ್ನುವ ಕಾರಣಕ್ಕೆ ಅಂಗವಿಕಲ ಎನ್ನುವ ವಿಷಯ ಗೊತ್ತಿದ್ದರೂ, ತಮ್ಮ ಪರಿಸ್ಥಿತಿಗೆ ಅನುಗುಣವಾಗಿ ಜಾನಕಿಯನ್ನು ವಿರುಪಾಕ್ಷನೊಂದಿಗೆ ವಿವಾಹ ಮಾಡಿಕೊಟ್ಟಿದ್ದಾರೆ. ತಮ್ಮ ಸ್ಥಿತಿಗೆ ತಕ್ಕಂತೆ ವರದಕ್ಷಿಣೆಯನ್ನೂ ಕೊಟ್ಟಿದ್ದಾರೆ. ನೀವು ವಿಚ್ಛೇದನೆ ಕೇಳಲು ಕಾರಣವೇನು ಎಂದು ಕೇಳಿದಾಗ "ನನ್ನ ಗಂಡ ನನಗೆ ನಿನ್ನ ತವರು ಮನೆಗೆ ಹೋಗಿ ಹಣ ತಗೊಂಡು ಬಾ, ನೀನು ತಂದಿರೊ ವರದಕ್ಷಿಣೆ ಹಣ ಕಡಿಮೆ ಇದೆ ಎಂದು ಹೊಡಿತಾ ಇದ್ದ. ಅಲ್ಲದೆ ನನ್ನ ಸದಾ ಅನುಮಾನದ ದೃಷ್ಟಿಯಿಂದ ನೋಡ್ತಾ ಇದ್ದ. ನನ್ನ ಗಂಡನ ಒಂದು ಕಾಲು ಸರಿ ಇರ್‍ಲಿಲ್ಲ. ಹಾಗಾಗಿ ನಾನು ಅಂಗವಿಕಲ ಅಂತಂದು ನೀನು ಬೇರೆ ಗಂಡಸರನ್ನ ನೋಡ್ತಿಯಲ್ಲ ಅಂತಿದ್ದ. ಯಾರಾದರೂ ಅಕ್ಕ-ಪಕ್ಕದ ಮನೆಯ ಗಂಡಸರು ನನ್ನ ಮಾತಾಡಿಸಿದ್ರೆ ನನಗೂ ಅವರಿಗೂ ಕೆಟ್ಟ ರೀತಿಯ ಸಂಬಂಧವನ್ನು ಕಟ್ಟುತ್ತಿದ್ದ. ಅಲ್ಲದೇ ರಾತ್ರಿ ಸಮಯದಲ್ಲಿ ನನ್ನ ಜೊತೆ ಕೆಟ್ಟ ರೀತಿಯಲ್ಲಿ ನಡೆದುಕೊಳ್ಳುತ್ತಾ ಇದ್ದ. ಅದನ್ನ ನನ್ನ ಬಾಯಿಂದ ಹೇಳೋಕೆ ನನಗೆ ನಾಚಿಕೆಯಾಗುತ್ತೇ. ಅಲ್ಲದೇ ನನ್ನ ಗಂಡನ ಅಣ್ಣ (ಭಾವ) ನನ್ನ ಕೆಟ್ಟ ರೀತಿಯಲ್ಲಿ ನೋಡ್ತಾ ಇದ್ದ. ಇವನ್ನ ನನ್ನ ಗಂಡಂಗೆಳಿದರೆ ನಾನು ನಿನ್ನ ಮೇಲೆ ಅನುಮಾನ ಪಡ್ತೀನಿ ಅಂತ. ನೀನು ನನ್ನ ಅಣ್ಣನ ಮೇಲೆ ಅನುಮಾನ ಪಡ್ತೀಯೇನು ಅಂತಂದು ನನ್ನೆ ಬೈತಾ ಇದ್ದ.

ನಾನು ಇವತ್ತಲ್ಲ ನಾಳೆ ಸರಿ ಹೋಗಬಹುದು ಅಂದು ಕೊಂಡು ಅವನು ಕೊಡೋ ಎಲ್ಲಾ ಹಿಂಸೆಗಳನ್ನು ಸಹಿಸಿಕೊಂಡು ಬದುಕುತ್ತಾ ಇದ್ದೆ. ಆದರೆ ಅವನ ಕೆಟ್ಟ ಬುದ್ಧಿ ಮಾತ್ರ ಕಡಿಮೆನೇ ಆಗಲಿಲ್ಲ. ದಿನೇ ದಿನೇ ಇನ್ನೂ ಹೆಚ್ಚಿನ ರೀತಿಯಲ್ಲಿ ಹಿಂಸೆ ಕೊಡೋಕೆ ಪ್ರಾರಂಭಿಸಿದ. ಅದಕ್ಕೆ ನಾನು ನನ್ನ ತಂದೆ-ತಾಯಿಗಳಿಗೆ ಈ ವಿಷಯ ತಿಳಿಸಿದೆ. ಅವರು ಬಂದು ನನ್ನ ಗಂಡನಿಗೆ ಬುದ್ಧಿವಾದ ಹೇಳಿದ್ರು. ಅವರೆದುರಿಗೆ ನಾನು ಇನ್ನು ಮುಂದೆ ಹಾಗೆಲ್ಲ ಮಾಡಲ್ಲ ಅಂತ ಹೇಳಿ, ನಂತರ ಮತ್ತೆ ನನಗೆ ಹಿಂಸೆ ಕೊಡೋಕೆ ಪ್ರಾರಂಭಿಸಿದ. ಹಾಗಾಗಿ ನಾನು ನನ್ನ ತವರು ಮನೆಗೆ ಹೋಗಿ ಈ ವಿಷಯ ತಿಳಿಸಿ ನಾನು ಅಂಥವನ ಜೊತೆ ಬದುಕೋದಿಲ್ಲ ಎಂದು ಹೇಳಿ ಅವನಿಂದ ಬಿಡುಗಡೆ ಬೇಕು ಅಂಥ ಕೋರ್ಟಿನಲ್ಲಿ ಅರ್ಜಿ ಸಲ್ಲಿಸಿರುವೆ.

ನಾನು ಅರ್ಜಿ ಸಲ್ಲಿಸಿ ೭ ತಿಂಗಳಾಗಿದೆ. ನಾನು ಅರ್ಜಿ ಕೊಟ್ಟ ಆದ ಮೇಲೆ ನನ್ನ ಗಂಡ ನನ್ನ ಮೇಲೇನೇ ಮನೆಯಲ್ಲಿ ಇಟ್ಟಿದ್ದ ಹಣವನ್ನು ಕದ್ದುಕೊಂಡು ಹೋಗಿದ್ದಾಳೆ. ಆದ್ರು ನಾವು ಅವಳು ಮಾಡಿರೋ ತಪ್ಪನ್ನ ಕ್ಷಮಿಸ್ತೀವಿ. ಅವಳಿಗೆ ವಿಚ್ಛೇದನೆ ಕೊಡದೆ ನನ್ನ ಜೊತೆ ಬಂದು ಬದುಕುವಂತೆ ಮಾಡ್ರಿ ಎಂದು ನನ್ನ ಮೇಲೆ ಅರ್ಜಿ ಹಾಕಿದಾನೆ". ಗಂಡನನ್ನು ಬಿಟ್ಟು ಬಂದಿದ್ದಿರಲ್ಲ. ಈಗ ನಿಮಗೆ ಏನ್ ಅನಿಸ್ತಾ ಇದೆ. "ನನಗೀಗ ತುಂಬಾ ಆರಾಮ ಅನ್ನಿಸ್ತಿದೆ. ಆದಷ್ಟು ಬೇಗ ಅವನಿಂದ ಬಿಡುಗಡೆ ಸಿಕ್ರೆ ನಾನು ನನ್ನ ಓದನ್ನ ಮುಂದುವರಿಸಬೇಕು ಅನ್ನಿಸ್ತಾ ಇದೆ. ನಾನು ಚೆನ್ನಾಗಿ ಓದಿ ನನ್ನ ಕಾಲ ಮೇಲೆ ನಾನು ನಿಂತು ಬದುಕಬೇಕು ಅನಿಸ್ತಾಯಿದೆ. ಕೂತ್ರು ನಿಂತ್ರು ಅನುಮಾನ ಪಡ್ತಾ ಇದ್ದ. ಈಗ ಇದು ಯಾವುದು ಇಲ್ಲ". ನೀವು ಈಗ ಎಲ್ಲಿ ಇದ್ದೀರಾ ನಿಮ್ಮ ಜೀವನ ನಿರ್ವಹಣೆ ಹೇಗೆ? ಎಂಬ ಪ್ರಶ್ನೆಗೆ "ಈಗ ನಾನು ನನ್ನ ತವರು ಮನೆಯಲ್ಲಿ ಇದ್ದೀನಿ. ನನ್ನ ಗಂಡನಿಂದ ಕೋರ್ಟಿನ ವ್ಯವಹಾರ ನೋಡಿಕೊಳ್ಳೋಕೆ ಮತ್ತೆ ನನ್ನ ಜೀವನ ನೋಡಿಕೊಳ್ಳೋಕೆ ಅಂತ ಇಂತಿಷ್ಟು ಹಣ ಕೊಡ್ತಾರೆ. ಅವರು ಕೊಡೋ ಹಣ ನನಗೆ ಸಾಕಾಗುತ್ತೆ. ಮುಂದೆ ಏನಾದ್ರು ಹೆಚ್ಚು ಕಡಿಮೆಯಾದ್ರೆ ನಾನೇ ಯಾವುದಾದ್ರು ಕೆಲಸಕ್ಕೆ ಸೇರಿಕೊಳ್ಳುತ್ತೀನಿ. ನನ್ನ ಗಂಡ ತುಂಬಾ ಹುಷಾರಿದಾರೆ, ನನಗೆ ಜೀವನಾಂಶ ಕೊಡಬೇಕಾಗುತ್ತೆ ಅಂತಂದು. ನನ್ನನ್ನ ಅವನ ಜೊತೆ ಬಾಳೊದಕ್ಕೆ ಕರಿತಿದಾನೆ" ನೀವು ಗಂಡನಿಂದ ವಿಚ್ಛೇದನೆ ಪಡೆದಿರುವುದಕ್ಕೆ ಅಕ್ಕಪಕ್ಕದವರು, ಸಂಬಂಧಿಕರು ಏನು ಹೇಳುತ್ತಾರೆ? "ಯಾರು ಏನದ್ರೂ ಅವರು ಬಂದು ನನ್ನ ಕಷ್ಟನೇನು ಹಂಚಿಕೊಳ್ಳೋದಿಲ್ಲ. ನಮ್ಮನೆ ಅಕ್ಕಪಕ್ಕದವರು ನಾನು ನೀರು ತರೋದಕ್ಕೆ ಅಥವಾ ಎಲ್ಲಿಗಾದ್ರು ಹೊರಗೆ ಹೋದ್ರೆ ಅಯ್ಯೋ ನೋಡು ಗಂಡನ್ನ ಬಿಟ್ಟು ಬಂದಿದಾಳೆ ಅಂತಂದ್ರೆ ಕೆಲವ ಹುಡುಗರು ನನ್ನ ಮದುವೆಯಾಗ್ತಿಯಾ ಇನ್ನೂ ನಿನಗೆ ಚಿಕ್ಕ ವಯಸ್ಸು ಎಂದು ನಗ್ತಾರೆ. ಅವನೆಲ್ಲ ನಾನು ತಲೆಗೆ ಹಚ್ಚಿಕೊಳ್ಳೋದಿಲ್ಲ. ನನಗೇನಿದ್ರು ಈಗ ನನ್ನ ಗಂಡನಿಂದ ಬಿಡುಗಡೆ ಸಿಕ್ಕು ನಾನು ಚೆನ್ನಾಗಿ ಓದಿ ಒಂದು ಕೆಲಸ ತಗೊಂಡು ನನ್ನ ಹಣದಿಂದಾನೆ ನಾನು ಬದುಕಬೇಕು" ವಿಚ್ಛೇದನೆ ದೊರೆತ ನಂತರ ಮತ್ತೊಂದು ಮದುವೆ ಆಗ್ತಿರಾ? ಆದ್ರು ಆಗಬಹುದು, ಎಲ್ಲರೂ ಅವನಂಗೆ ಕೆಟ್ಟೋರಿರೋದಿಲ್ಲ, ಒಳ್ಳೆಯವರಿರ್ತಾರೆ ಅಂಥವರು ಸಿಕ್ರೆ ಇನ್ನೊಂದು ಮದುವೆಯಾಗ್ತೀನಿ" ಎನ್ನುವ ಮೂಲಕ ತಮ್ಮ ಮಾತನ್ನು ಮುಗಿಸಿದರು.

ಪ್ರಕರಣ-೨

೨೨ ವರ್ಷದ ಕನಕ ಅನಕ್ಷರಸ್ಥೆ, ಇವರು ವಿಚ್ಛೇದನೆಗಾಗಿ ಕಾಯುತ್ತಿರುವ ಮಹಿಳೆ. ಇವರ ತಂದೆ ತೀರಿ ಹೋಗಿದ್ದು ತಾಯಿ ಬಳೆ ವ್ಯಾಪಾರ ಮಾಡಿ, ಬಂದ ಹಣದಿಂದ ಮನೆ ಜವಾಬ್ದಾರಿ ನೋಡಿ ಕೊಳ್ಳುತ್ತಿರುವರು. ಕನಕಳ ತಾಯಿ ತಮ್ಮ ಪರಿಸ್ಥಿತಿಗೆ ಅನುಗುಣವಾಗಿ ಕನಕಾಳ ವಿವಾಹವನ್ನು ೩೩ ವರ್ಷದ ಆಂಜನೇಯ ಎಂಬುವವರೊಂದಿಗೆ ಮಾಡಿಕೊಟ್ಟಿದ್ದು, ವಿವಾಹವಾಗಿ ೪ ವರ್ಷ ಕಳೆದಿದ್ದು ವಿಚ್ಛೇದನೆಗಾಗಿ ಅರ್ಜಿ ಸಲ್ಲಿಸಿ ೬ ತಿಂಗಳು ಆಗಿದೆ. ಯಾವ ಕಾರಣಗಳಿಗೆ ನೀವು ವಿಚ್ಛೇದನೆಗಾಗಿ ಅರ್ಜಿ ಸಲ್ಲಿಸಿದ್ದೀರಿ? ಎಂಬ ನಮ್ಮ ಪ್ರಶ್ನೆಗೆ ನನ್ನ ಗಂಡ ಮತ್ತೊಂದು ಮದುವೆಯಾಗಿದ್ದಾರೆ. ಅಲ್ಲದೆ ನನಗೆ ನಾನಾ ತರಹದಲ್ಲಿ ಹಿಂಸೆಗಳನ್ನು ನೀಡಿದ್ದಾರೆ" ಎಂದು ಉತ್ತರಿಸಿದಳು. ನಿಮ್ಮ ಗಂಡ ನಿಮಗೆ ಯಾವ ಬಗೆಯಲ್ಲಿ ಹಿಂಸೆ ನೀಡ್ತಾ ಇದ್ರು? "ನನ್ನ ಗಂಡ ನನಗೆ ಯಾವಾಗ್ಲೂ ಹೊಡಿತಾಯಿದ್ದ. ನೀನು ನಿನ್ನ ಅಮ್ಮನತ್ರ ಹೋಗಿ ಹಣ ಇಸಕೊಂಡು ಬಾ ಹಂತ ಪೀಡಿಸ್ತಾ ಇದ್ದ. ನಾನು ಯಾವುದಾದ್ರು ಹಬ್ಬಕ್ಕೆ ಇಲ್ಲಂದ್ರೆ ಯಾವುದಕ್ಕರ ತವರುಮನೆಗೆ ಹೋಗ್ತೀನಿ ಅಂತ ಕೇಳಿದ್ರೆ ಹೋಗು, ಬರುವಾಗ ಹಣ ತಗೊಂಡು ಬಾ, ಇಲ್ಲಂದ್ರೆ ಬರಲೇಬೇಡ ಅಂತಿದ್ದ. ನಾನು ತವರುಮನೆಯಿಂದ ಹಣನ ಎಲ್ಲಿಂದ ತಗೊಂಡು ಹೋಗ್ಲಿ ಅದಕ್ಕೆ ಬರಿಗೈಲಿ ಹೊದ್ರೆ ನೀನು ಹಣ ತಂದಿಲ್ಲಲ್ಲ, ಅಂತಂದು ಬೀಡಿ ತಗೊಂಡು ಸುಡ್ತಾ ಇದ್ದ, ಇಲ್ಲಂದ್ರೆ ಕೋಲಿನಿಂದ ಹೊಡಿತಾ ಇದ್ದ. ಒಂದು ಸರಿ ನನ್ನ ಕಣ್ಣ್ ಮುಂದೆ ಒಂದು ತಟ್ಟೆಯಲ್ಲಿ ಅನ್ನ ನೀಡಿಕೊಂಡು ಬಂದು ಅದಕ್ಕೆ ಗದ್ದೆಗೆ ಹೊಡಿಯೋ ಔಷಧನ (ಕ್ರಿಮಿನಾಶಕ) ಕಲಿಸಿದ ನಂತರ ನಾವಿಬ್ರು ಸತ್ತುಬಿಡೋಣ ನಮ್ಮನ್ನ ಯಾರು ಸೇರೋದಿಲ್ಲ ಅಂತಂದು ನನಗೆ ಬಲವಂತವಾಗಿ ತಿನ್ನಿಸೋಕೆ ಬಂದ ನನಗೆ ಅನುಮಾನ ಬಂದು ನೀನು ಮೊದಲು ಊಟ ಮಾಡು. ನಾನು ನಂತರ ಮಾಡ್ತೀನಿ ಅಂಥಂದೆ. ಆಗ ಬಲವಂತವಾಗಿ ಆ ಅನ್ನನ ನನ್ನ ಬಾಯಲ್ಲಿ ಇಡೋದಕ್ಕೆ ಬಂದಾಗ ನನ್ನ ಕೈ ಆ ತಟ್ಟೆಗೆ ಬಡ್ದು ಅದು ಕೆಳಗೆ ಚೆಲ್ಲಿತು. ನೀನು ಅನ್ನನ ಕೆಳಗೆ ಚೆಲ್ಲಿದೆಯಲ್ಲ ಅಂತಂದು ದಪ್ಪನ ಕೋಲು ತಗೊಂಡು ಹೊಡೆದ. ನನ್ನ ಗಂಡ ನನಗೆ ಹೊಡೆಯೋದನ್ನ ಸುಡೋದನ್ನ ನೋಡ್ಕೊಂಡು ನಮ್ಮ ಅತ್ತೆ, ನನ್ನ ಗಂಡನ ಅಣ್ಣಂದಿರು, ಅವರ ಹೆಂಡ್ತೀರು ಸುಮ್ನೆ ಇರ್ತಿದ್ರು. ಯಾಕೀಗೆ ಮಾಡ್ತೀಯಾ ಅಂತ ಒಂದು ಸಲಾನು ಬಂದು ಕೇಳ್‌ಲಿಲ್ಲ. ನನ್ನ ಗಂಡನ ಹೊಡ್ತಾ ದಿನಾ ದಿನಾ ಜಾಸ್ತಿಯಾಗ್ತಾನೆ ಹೋಯ್ತು. ಅದಕ್ಕೆ ನಾನು ತವರು ಮನೆಗೆ ಬಂದೆ. ನಾನು ಬಂದು ಸ್ವಲ್ಪ ದಿನಕ್ಕೆ ಮತ್ತೊಂದು ಮದುವೆಯಾಗಿದ್ದಾನಂತೆ. ಅದಕ್ಕೆ ನಾನು ನನ್ನ ಗಂಡನಿಂದ ಬಿಡುಗಡೆ ಬೇಕು ಅಂತ ಅರ್ಜಿ ಹಾಕಿದಿನಿ" ಎಂದು ಹೇಳಿದಳು. ಈಗ ನೀವು ಎಲ್ಲಿದೀರಿ? ಈಗ ನಿಮಗೆ ನಿಮ್ಮ ಜೀವನದ ಬಗ್ಗೆ ಏನ್ ಅನ್ನಿಸ್ತಾ ಇದೆ? "ನಾನೀಗ ನನ್ನ ತವರುಮನೆಯಲ್ಲಿ ಇದೀನಿ. ನನಗಂತು ಓದಕ್ಕಾಗಿಲ್ಲ. ನಾನು ನನ್ನ ಅಮ್ಮನ ವ್ಯಾಪಾರದಲ್ಲಿ ಸಹಾಯ ಮಾಡಿ ನನ್ನ ತಂಗಿಯರಿಗಾದ್ರು ಓದಿಸಿ ಅವರು ಕಾಲ ಮೇಲೆ ಅವರು ನಿಲ್ಲೋ ಹಾಗೆ ಮಾಡಬೇಕು. ಅನ್‌ಕೊಂಡಿದ್ದೇನೆ. ನನ್ನ ಅಮ್ಮನ ನೋಡಿಕೊಳ್ಳೋರು ಯಾರು ಇಲ್ಲ ನಾನೇ ಅವರನ್ನ ಚನ್ನಾಗಿ ನೋಡ್ಕೋತಿನಿ. ನಾನು ನನ್ನ ಗಂಡನ ಮನೆಯಲ್ಲಿ ಇದ್ದಾಗ ನನ್ನ ಗಂಡ ಯಾವಾಗ ಬಂದು ಹೇಗೆ ನನ್ನ

ಹೊಡಿತಾನೊ ಅನ್ನೊ ಭಯದಲ್ಲಿನೆ ಇರ್‍ತಿದ್ದೆ ಈಗ ಆ ಭಯ ಇಲ್ಲ". ನಿಮ್ಮ ಜೀವನ ನಿರ್ವಹಣೆಗೆ ಕೋರ್ಟಿನ ವ್ಯವಹಾರಕ್ಕೆ ನಿಮ್ಮ ಗಂಡನಿಂದ ಹಣ ಸಿಗ್ತಾ ಇದ್ದೆನಾ? "ಈಗಂತು ಏನು ಸಿಗ್ತಾ ಇಲ್ಲ. ನನ್ನ ಅಮ್ಮನೆ ಹಣ ಕೊಡ್ತಾ ಇದ್ದಾರೆ. ನಾನು ನನ್ನ ಗಂಡನಿಂದ ಹಣ ಬೇಕು ಎಂದು ಅರ್ಜಿನ ಸಲ್ಲಿಸಿದೀನಿ". ನಿಮಗೆ ಯಾರದ್ರು ನೀನು ಗಂಡನ್ನ ಬಿಟ್ಟು ಬಂದಿದೀಯ ಅಂತ ಅಂದಿದಾರ? "ಇದುವರೆಗೂ ಯಾರೂ ಅಂದಿಲ್ಲ. ಅಂತ ಕೆಟ್ಟ ಗಂಡನ ಜೊತೆ ಏನ್ ಸಂಸಾರ ಮಾಡ್ತೀದಿ ಬಿಡು, ಬಿಟ್ಟು ಬಂದು ಚನ್ನಾಗಿ ಮಾಡ್ದಿ ಅಂತದ್ರು. ಮತ್ತೊಂದು ಮದುವೆಗೆ ಬಗ್ಗೆ ನಿಮ್ಮ ಅಭಿಪ್ರಾಯವೇನು? ಎಂದು ಕೇಳಿದಾಗ "ಒಂದು ಮಾಡಿಕೊಂಡು ಅನುಭವಿಸಿರೊದೆ ಸಾಕು, ಇನ್ನು ಇನ್ನೊಂದು ಮದುವೆ ಉಸಾಬರಿನೆ ಬೇಡ ನನಗೆ ಬೇಗ ನನ್ನ ಗಂಡನಿಂದ ಬಿಡುಗಡೆ ಸಿಗಬೇಕು ಹಾಗೆ ಕೋರ್ಟಿನಲ್ಲಿ ನನಗೆ ನನ್ನ ಗಂಡನಿಂದ ಹಣ ದೊರೆಯುವಂತಾಗಬೇಕು" ಎಂದು ದೃಢತೆಯಿಂದ ಹೇಳುತ್ತಾರೆ.

**ಪ್ರಕರಣ-೩**

೨೭ ವರ್ಷದ ಪಾರ್ವತಿ ಪಿ.ಯು.ಸಿ.ಯವರೆಗೂ ಓದಿದ್ದು, ಇವರು ವಿಚ್ಛೇದನೆಗಾಗಿ ಕಾಯುತ್ತಿರುವ ಮಹಿಳೆಯಾಗಿದ್ದಾರೆ. ಇವರ ವಿವಾಹವು ರಾಜಶೇಖರ ಎಂಬುವವರೊಂದಿಗೆ ನೆರವೇರಿದ್ದು, ಇವರು ಬಿ.ಎ. ವರೆಗೂ ಓದಿರುವರು. ಇವರ ವಿವಾಹವಾಗಿ ೭ ವರ್ಷಗಳು ಕಳೆದಿದ್ದು, ವಿಚ್ಛೇದನೆಗಾಗಿ ಅರ್ಜಿ ಸಲ್ಲಿಸಿ ಒಂದುವರೆ ವರ್ಷವಾಗಿದೆ. ನೀವು ಯಾವ ಕಾರಣಕ್ಕೆ ವಿಚ್ಛೇದನೆಗಾಗಿ ಅರ್ಜಿ ಸಲ್ಲಿಸಿರುವಿರಿ? "ಇದೊಂದು ಮೋಸದ ಮದುವೆ ನನ್ನ ಗಂಡನ ಮನೆಯವರಿಗೆ ಇವನು ದುಡಿಯಲು ನಾಲಯಕ್ಕು ಅಲ್ಲದೇ ದುಶ್ಚಟಗಳ ದಾಸ ಎಂದು ಗೊತ್ತಿದ್ದರು ವಿವಾಹ ಮಾಡಿಸಿದ್ದಾರೆ. ಈ ವಿಷಯ ನಮಗೆ ಯಾರಿಗೂ ಗೊತ್ತಾಗಲೇ ಇಲ್ಲ. ಮದುವೆಯಾದ ಮೇಲೆ ಗೊತ್ತಾಗಿದ್ದು. ಇನ್ನೇನು ಮದುವೆ ನಡೆದು ಹೋಗಿದೆ ಅಂದುಕೊಂಡು ಅವನ ಜೊತೆ ಜೀವನ ಮಾಡೋದಕ್ಕೆ ಹೋದೆ. ನನ್ನ ಗಂಡ ಅವರ ಅಪ್ಪ ಅಮ್ಮನತ್ತಿರ ಇರಲಿಲ್ಲ. ಅಜ್ಜಿಯತ್ರ ಇದ್ದದ್ರಿಂದ ನಾನು ಅಜ್ಜಿ ಇದ್ದ ಮನೆಗೆ ಹೋದೆ. ನಾನು ಹೋದ ಒಂದೆರಡು ದಿನಕ್ಕೆ ಅಜ್ಜಿ ತನ್ನ ಮಗನ ಮನೆಗೆ ಹೋದ್ರು. ಅವರು ಹೋದ ಮೇಲೆ ಅವನಿಗೆ ಹೇಳೋರು ಕೇಳೋರು ಯಾರು ಇಲ್ಲದಂಗಾಯ್ತು ತನ್ನ ಕೆಟ್ಟ ಹವ್ಯಾಸಗಳನ್ನು ಇನ್ನು ಹೆಚ್ಚು ಮಾಡೋಕೆ ಶುರು ಮಾಡಿದ. ಅವನು ಆಟೋ ಓಡಿಸ್ತಾ ಇದ್ದ. ಅದರಿಂದ ಸಂಪಾದನೆ ಆದ ಹಣದಿಂದಾನೆ ಜೀವನ ನಡೆಬೇಕಿತ್ತು. ಆದರೆ ಇವನು ಆಟೋ ಓಡಿಸಿ ಬಂದಂತ ಹಣದಲ್ಲಿ ದಿನಕ್ಕೆ ೧೦-೨೦ ರೂ. ಕೊಟ್ಟು ಉಳಿದಿದ್ದನೆಲ್ಲ ಕುಡಿತಾ ಇದ್ದ. ನೀನು ಕೋಡೋದುದ್ದಲ್ಲಿ ಸಂಸಾರ ಮಾಡೋಕೆ ಆಗಲ್ಲ ಅಂತ ಅಂದ್ರೆ ಆಟೋ ಸರಿಯಾಗಿಲ್ಲ ಅಂತಿದ್ದ. ಅದಕ್ಕೆ ನಾನು ನನ್ನ ತವರಿನವರ ಸಹಾಯದಿಂದ ಹೊಸ ಆಟೋನ ಕೊಡಿಸಿದೆ. ಆದರೂ ಸರಿಯಾಗಿ ಹಣ ತಂದುಕೊಡ್ತಿರಲಿಲ್ಲ. ನಾನೇನಾದ್ರು ಹಣ ಕೊಡು ಅಂತ ಕೇಳಿದ್ರೆ ನನ್ನನ್ನೆ ಹಣ ಕೇಳ್ತೀಯ ಎಂದು ಕೆಟ್ಟ ರೀತಿಯಲ್ಲಿ ಬೈತಾ ಇದ್ದ. ಇಲ್ಲಂದ್ರೆ ಹೊಡಿತಾ ಇದ್ದ. ನನ್ನ ತಾಯಿ ಮನೆಯಲ್ಲಿ ನಾನು ಉಪವಾಸದಿಂದ ಇರ್‍ತಾನೆ ಇರಲಿಲ್ಲ. ಆದರೆ ಇವನ ಮಾಡಿಕೊಂಡು ಮೇಲೆ ಎರಡು ದಿನಕ್ಕೆ ಮೂರು ದಿನಕ್ಕೆ ಉಪವಾಸ ಇರಬೇಕಾಗಿ ಬಂತು. ಅವನೇನು ಹೊರಗಡೆ ತಿಂದುಕೊಂಡು ಬರ್‍ತಿದ್ದಾ.

ನಾನೇನಾದ್ರ ಅಡುಗೆ ಮಾಡೋದಕ್ಕೆ ಹಣ ಕೇಳಿದ್ರೆ ನನ್ನ ದನಕ್ಕೆ ಹೊಡೆಯೊತರ ಹೊಡಿತಾ ಇದ್ದ. ಇದರ ಮಧ್ಯೆ ನನಗೆ ಬೆನ್ನು ನೋವು ಬರುತ್ತೆ ಆಟೋ ಹೊಡಿಸೋಕೆ ಆಗೊಲ್ಲ ಅಂತಂದ. ನಾನು ಯಾವುದಾದ್ರು ವ್ಯಾಪಾರ ಮಾಡ್ತೀನಿ. ಅಂತ ನನ್ನ ಅತ್ರ ಇರೋ ಎಲ್ಲ ಬಂಗಾರದ ಒಡವೆಗಳನ್ನು ಬಲವಂತವಾಗಿ ತಗೊಂಡು ಹೋಗಿ ಅಡಯಿಟ್ಟು ಬಂದ ಹಣವನ್ನೆಲ್ಲ ತನ್ನ ಚಟಗಳಿಗೆ ಬಳಸಿಕೊಂಡ. ಇಂತದ್ರಲ್ಲಿ ನಾನು ಗರ್ಭಿಣಿಯಾದೆ. ಮಗು ಹುಟ್ಟಿದ ಮೇಲೆ ಸರಿ ಹೋಗಬಹುದು. ಅಂದುಕೊಂಡು ಅವನ ಜೊತೆ ಹೊಂದಾಣಿಕೆಯ ಜೀವನ ಮಾಡ್ದೆ ಆದ್ರೆ ಮಗು ಹುಟ್ಟಿದ ಮೇಲು ಅವನು ಸರಿ ಹೋಗಲಿಲ್ಲ. ನಾನು ನನ್ನ ತಂದೆ-ತಾಯಿ ಅವರ ಬಳಿ ನನ್ನ ಗಂಡ ನನಗೆ ಹೊಡೀತಾನೆ ಅಂತಾ ಹೇಳಿರಲಿಲ್ಲ. ಯಾಕೆಂದರೆ ಈಗಾಗಲೇ ಅವರು ನಮ್ಮ ಮಗಳನ್ನು ಎಂಥವನಿಗೆ ಕೊಟ್ಟು ಬಿಟ್ಟಿದೀವಿ ಅಂತಾ ತುಂಬಾ ನೊಂದುಕೊಂಡಿದ್ದರು. ಹಾಗಾಗಿ ಅವರೆದುರಿಗೆ ನನ್ನ ಗಂಡ ಮನೆಗೆ ಏನು ತಂದು ಕೊಡೋದಿಲ್ಲ ಅಂತ ಮಾತ್ರ ಹೇಳಿದ್ದೆ. ಆಗಾಗ ನನಗೆ ಅವರು ಹಣದ ಸಹಾಯ ಮಾಡ್ತಾ ಇದ್ರು. ಎಷ್ಟು ದಿನ ಅಂತ ನನ್ನ ತವರಿನವರ ಸಹಾಯ ಪಡೆಯಬೇಕು ಎಂದೆನಿಸಿ, ನಾನೇ ಮನೆ ಮುಂದೆ ಒಂದು ಸಣ್ಣ ವ್ಯಾಪಾರ ಮಾಡೋಕೆ ಪ್ರಾರಂಭಿಸಿದೆ. ಆಗಂತು ಅವನು ಹೊಡೆಯೊದರ ಜೊತೆಗೆ ಅನುಮಾನ ಪಡೋದಕ್ಕೆ ಪ್ರಾರಂಭಿಸಿದ. ವ್ಯಾಪಾರದ ದೃಷ್ಟಿಯಿಂದ ಯಾರಾದ್ರು ಹುಡುಗರನ್ನ ಮಾತಾಡ್ಸಿದರೆ ಅವನಿಗೂ ನಿನಗೂ ಏನು ಸಂಬಂಧ ಇದೆ. ಅಂತ ಕಬ್ಬಿಣದ ಸರಳ(ರಾಡ್)ನ್ನು ಕಾಸಿ ಕೈಗೆ ಬರೆಯಾಕ್ತ ಇದ್ದ. ನೀನು ಸರಿಯಾಗಿದೀಯ ಇಲ್ಲ. ನೀನು ಅವನ ಜೊತೆ ಮಲಗಿಕೊಂಡಿದ್ದೇನು ಎಂದು ಕೆಟ್ಟ ರೀತಿಯಲ್ಲಿ ವರ್ತಿಸ್ತಾ ಇದ್ದ. ಒಂದೊಂದಿನ ಜಾಸ್ತಿ ಕುಡಿದು ಬಿಟ್ಟು ಮನೆಗೆ ಬಂದು ಅಡುಗೆ ಮಾಡಿದ್ದನ್ನೆಲ್ಲ ಚೆಲ್ಲಿ ಬಿಡುತ್ತಿದ್ದ. ನೀರನ್ನ ತುಂಬಿಸಿದ್ರೆ ಅದನ್ನೆಲ್ಲ ನೆಲದ ಮೇಲೆ ಚೆಲ್ಲಿ ಬಿಡ್ತಾ ಇದ್ದ. ಒಂದು ಸಾರಿ ಮಾಡಿದ ಅಡುಗೆಯನ್ನೆಲ್ಲ ನನ್ನ ತಲೆ ಮೇಲೆ ಸುರಿದ್ದದನ್ನು ನೋಡಿ ನನ್ನ ಮಗಳಿಗೆ ಉಸಿರಾಟನೆ ನಿಂತಂಗಾಗಿತ್ತು. ಆಮೇಲೆ ನಾನು ನನ್ನ ಮಗಳು ಇಲ್ಲೇ ಇದ್ರೆ ಬದುಕೋದಿಲ್ಲ ಅಂಥಂದು ಅವಳನ್ನ ತವರು ಮನೆಗೆ ಕಟ್ಟು ಕಳುಹಿಸಿದೆ. ಅವಳನ್ನು ನೀನು ಎಂಗ ಕಟ್ಟು ಕಳುಹಿಸಿದೆ. ನನ್ನ ಮಗಳನ್ನ ಎಂಗ ಕೊಟ್ಟು ಕಳುಹಿಸಿದೆ. ಆ ಮಗು ನಂದೇನಾ ಅಥವಾ ಬೇರೆಯವರದ ಅಂತ ಬೈಯೋದರ ಜೊತೆಗೆ ನನ್ನ ಕಣ್ಣಿಗೆ ಹೊಡೆದ. ನನ್ನ ಕಣ್ಣಿಗೆ ಪೆಟ್ಟು ಬಿದ್ದಿದ್ದರಿಂದ ನನಗೆ ವ್ಯಾಪಾರ ಮುಂದುವರಿಸೋದಕ್ಕೆ ಆಗಲಿಲ್ಲ. ಅದಕ್ಕೆ ಬೇರೆಯವರ ಸಹಾಯ ದಿಂದ ಒಂದು ಎನ್‌ಜಿ.ಒ. (Non-Government Orgnization)ನಲ್ಲಿ ಕೆಲಸಕ್ಕೆ ಸೇರಿಕೊಂಡೆ. ನಾನು ಕೆಲಸಕ್ಕೆ ಸೇರಿದ ಮೇಲಂತು ಅವನು ನನಗೆ ಕೊಡೊ ಹಿಂಸೆ, ಅನುಮಾನಪಡೋ ಬುದ್ಧಿ ಇನ್ನೂ ಜಾಸ್ತಿಯಾಯ್ತು. ಕೆಲಸದ ನಿಮಿತ್ತ ಮನೆಗೆ ತಡವಾಗಿ ಬಂದರೆ ಯಾರ ಜೊತೆ ಯಾವ ಲಾಡ್ಜ್‌ಲ್ಲಿದ್ದಿ ಅಂತಾ ಕೇಳ್ತಾ ಇದ್ದ. ನೀನು ಕೆಲಸಕ್ಕೆ ಹೋಗಬೇಡ. ನೀನು ಕೆಲಸಕ್ಕೆ ಹೊದ್ರೆ ಯಾರ ಜೊತೆ ಏನ್‌ಮಾಡ್ತಿಯ ಅಂತ ಹೇಗೆ ಹೇಳಬೇಕು. ನೀನು ಮನೆನಲ್ಲಿನೇ ಇರು. ನಾನು ತಂದ ಹಾಕಿದರೆ ತಿನ್ನು ಇಲ್ಲಂದ್ರೆ ಉಪವಾಸ ಸಾಯಿ ಎಂದು ಒಣಕೆ ತಗೊಂಡು ನನ್ನ ಕಾಲಿಗೆ ಹೊಡೆದ. ನಾನು ಆ ಹೊಡೆತ ತಾಳಲಾರದೆ ಅವನಿಂದ ತಪ್ಪಿಸಿಕೊಂಡು ಬೇರೆಯವರ ಮನೆನಲ್ಲಿ ಹೋಗಿ ಅವರಿಂದ ಹಣ ಇಸ್ಕೊಂಡು ನಮ್ಮ ತಂದೆ-ತಾಯಿ ಮನೆಗೆ ಬಂದು ನನಗೆ ಅವನ ಜೊತೆ ಜೀವನ ಮಾಡೋಕೆ ಆಗಲ್ಲಿ ಅಂತಂದ್ಬು.

ಅವನ ಕೊಟ್ಟ ಎಲ್ಲ ಹಿಂಸೆಗಳನ್ನ ತಿಳಿಸಿದೆ. ನಮ್ಮ ಅಪ್ಪ-ಅಮ್ಮ ನನ್ನ ಕಷ್ಟಕ್ಕೆ ಸಹಕರಿಸಿದರು. ಆದ್ದರಿಂದ ನಾನು ಕೋರ್ಟಿನಲ್ಲಿ ಇವನಿಂದ ಮುಕ್ತಿ ಬೇಕು ಅಂತ ಅರ್ಜಿ ಸಲ್ಲಿಸಿದೀನಿ. ಅರ್ಜಿ ಸಲ್ಲಿಸಿದ ಮೇಲೂ ಅವನ ಕಾಟ ನನಗೆ ತಪ್ಪಲಿಲ್ಲ. ನಮ್ಮ ಮನೆ ಮುಂದೆ ಬಂದು ಜಗಳ ಮಾಡ್ತಾನೆ. ಅಲ್ಲದೆ ನಮ್ಮ ತಾಯಿಗೆ ನಿನ್ನ ಮಗಳನ್ನು ಹೀಗೇನು ಬೆಳೆಸೋದು. ಗಂಡನ್ನ ಬಿಟ್ಟು ಬಂದು ತವರು ಮನೆನಲ್ಲಿ ಇರು ಅಂತ ನಿನ್ನ ಮಗಳು ಕೆಲಸಕ್ಕೆ ಸೇರಿಕೊಂಡಿದ್ದಾಳಲ್ಲ. ಅಲ್ಲಿ ಬೇರೆಯಾರಾದ್ರುನು ನೋಡಿಕೊಂಡಿದ್ದಾಳೇನೂ. ಹಾಗೆ-ಹೀಗೆ ಅಂತ ಕೆಟ್ಟ ರೀತಿನಲ್ಲಿ ಬೈತಾನೆ ಇರ್‍ತಾನೆ". ನಿಮ್ಮ ಗಂಡನ ಬಗ್ಗೆ ನಿಮ್ಮ ಅತ್ತೆ-ಮಾವ ಅವರಿಗೆ ತಿಳಿಸಿರಲಿಲ್ಲ? "ಎಷ್ಟೋ ಸಾರಿ ಹೇಳಿದ್ದೆ, ಅವರು ಗಂಡ-ಹೆಂಡತಿ ಮಧ್ಯೆ ನಾವ್ಯಾಕೆ? ನೀವೇ ಸರಿ ಮಾಡಿಕೊಳ್ಳಿ ಅಂತಿದ್ರೇ ವಿನಃ ಹೆಚ್ಚಿನದೇನನ್ನು ಮಾಡಲಿಲ್ಲ". ನಿಮ್ಮ ಗಂಡನಿಂದ ಬೇರೆಯಾದ ಮೇಲೆ ನಿಮಗೆ ಏನ್ ಅನಿಸ್ತಾ ಇದೆ? "ಗುಹೆಯಿಂದ ಹೊರಗೆ ಬಂದಿದ್ದೀನಿ ಅನ್ನಿಸ್ತಾ ಇದೆ. ನನ್ನ ಗಂಡನಿಗೆ ಅವನು ಯಾವ ಬಟ್ಟೆ ಹಾಕೊಬೇಕು ಅಂತಾನೋ ನಾನು ಅದನ್ನ ಹಾರಬೇಕಿತ್ತು. ಯಾವಾಗ್ಲು ಸೆರಗನ್ನ ಮೈತುಂಬಾ ಹೊದಕೊಂಡು ಇರಬೇಕಿತ್ತು. ಇದೆಲ್ಲದ್ದಕ್ಕಿಂತ ಹೆಚ್ಚಾಗಿ ನನಗೆ ಅವನ ಎಲ್ಲ ಹಿಂಸೆಗಳಿಂದ ಮುಕ್ತಿ ಸಿಕ್ಕಿದೆ. ಆದಷ್ಟು ಬೇಗ ಅವನಿಂದ ನನಗೆ ಮುಕ್ತಿ ಸಿಕ್ಕರೆ ನಾನು ನನ್ನ ಮಗಳನ್ನು ಚೆನ್ನಾಗಿ ಓದಿಸ್ತೀನಿ. ನಾನು ನನ್ನ ಗಂಡನಿಂದ ಅನುಭವಿಸಿದ ಹಿಂಸೆ ಅವಳ ಮುಂದಿನ ಜೀವನದಲ್ಲಿ ಅವಳು ಅನುಭವಿಸಬಾರದು. ಅದಕ್ಕೆ ಅವಳನ್ನ ಚೆನ್ನಾಗಿ ಓದಿಸ್ತೀನಿ. ನನಗಂತು ನನ್ನ ಜೀವನದ ಎಲ್ಲ ಕಹಿಗಳನ್ನ ನೋಡಿ ಈ ಮದುವೆ ಅನ್ನೋದೆ ಹೀಗೇನಾ ಎಂದು ಅನಿಸ್ತಾ ಇದೆ". ನಿಮ್ಮ ಗಂಡನಿಂದ ಜೀವನಾಂಶ ಬೇಕು ಅಂತ ಕೇಳಿದಿರಾ? "ಅವನನ್ನು ನೆನಪಿಸುವಂತ ಯಾವುದು ನನಗೆ ಬೇಡ ಅವನು ಕಟ್ಟಿದ ತಾಳಿನು ಕಿತ್ತು ಬಿಸಾಕಿದ್ದೆ. ಆದರೆ ಮನೆಯಲ್ಲಿರೋರೆಲ್ಲ ಬರಿಕೊರಳಲ್ಲಿ ಇರೋದು ಸರಿಯಲ್ಲ. ಸಮಾಜ ನಿನ್ನ ಕೆಟ್ಟ ರೀತಿನಲ್ಲಿ ನೋಡುತ್ತೆ ಅಂತ ಅಂದದ್ದಕ್ಕೆ ಮತ್ತೆ ಅದನ್ನ ಹಾಕೊಂಡೆ. ಆ ತಾಳಿ ನೋಡಿದ್ರೆ ಸಾಕು ನನಗೆ ಮೈಯಲ್ಲ ಉರಿಯುತ್ತೆ. ಆದಷ್ಟು ಬೇಗ ಅವನು ಸತ್ತರೆ ನನಗೂ ಈ ತಾಳಿಯಿಂದ ಮುಕ್ತಿ ಸಿಗುತ್ತೆ. ಮುಂದೆ ಏನ್ ಮಾಡಬೇಕು ಅಂದುಕೊಂಡಿದ್ದಿರಾ? ಅಂತ ಕೇಳಿದ್ರೆ. "ನಾನು ಈಗ ಮಾಡ್ತಾ ಇರೋ ಎನ್.ಜಿ.ಒ.ನಲ್ಲಿನೇ ಕೆಲಸ ಮಾಡ್ತೀನಿ. ಒಂದು ವೇಳೆ ಈ ಕೆಲಸ ಹೋದ್ರೆ ಬೇರೆ ಯಾವುದಾದರೂ ಕೆಲಸಕ್ಕೆ ಸೇರಿ ನಾನೇ ದುಡಿದು, ನಾನು ಮತ್ತು ನನ್ನ ಮಗಳು ಬದುಕುತೀವಿ". ಇವರ ಮಾತಿನ ದಾಟಿನಲ್ಲಿಯೇ ಗೊತ್ತಾಗುತ್ತೆ ಇವರಿಗೆ ಮರುವಿವಾಹದ ಬಗ್ಗೆ ಇಷ್ಟವಿಲ್ಲವೆನ್ನುವುದು.

**ಪ್ರಕರಣ-೪**

೪೦ ವರ್ಷದ ಸಾವಿತ್ರಿಯವರು ವಿಚ್ಛೇದನೆ ಪಡೆದು ಜೀವನ ನಡೆಸುತ್ತಿರುವ ಮಹಿಳೆಯಾಗಿದ್ದಾರೆ. ಇವರು ೧೦ನೇ ತರಗತಿಯವರೆಗೂ ಓದಿದ್ದು, ಇವರ ವಿವಾಹವು ರಮೇಶ ಎನ್ನುವ ಸರ್ಕಾರಿ ಹುದ್ದೆಯಲ್ಲಿ ಇರುವಂಥ ವ್ಯಕ್ತಿಯೊಂದಿಗೆ ನೆರವೇರಿದ್ದು. ಇವರ ವಿವಾಹವಾಗಿ ೧೯ ವರ್ಷ ಕಳೆದಿದ್ದು. ಇವರು ವಿಚ್ಛೇದನೆ ಪಡೆದು ೧೦ ರಿಂದ ೧೨ ವರ್ಷ ಕಳೆದಿದೆ. ವಿಚ್ಛೇದನೆ ಯಾವ ಕಾರಣಕ್ಕೆ ಪಡೆದೀರಿ? "ನನ್ನ ಗಂಡನಿಗೆ

ಈ ಮುಂಚೆ ಮದುವೆಯಾಗಿದ್ದು, ಅದನ್ನ ಮುಚ್ಚಿಟ್ಟು ನನ್ನ ಮದುವೆ ಮಾಡಿಕೊಂಡರು. ಅವರ ಮೊದಲನೆ ಹೆಂಡ್ತಿ ಸತ್ತಿದಾಳಾದ್ರು ಅದನ್ನ ಮುಚ್ಚಿಟ್ಟು ಈ ವಿಷಯನಾ ತಿಳಿಸದೆ ನನ್ನ ಮದುವೆ ಮಾಡಿಕೊಂಡ್ರು. ಮದುವೆಯಾದ ಮೇಲೆ ನನಗೆ ಈ ವಿಷಯ ತಿಳಿತಾದರೂ ಅವರ ಜೊತೆ ಹೊಂದಿಕೊಂಡು ಜೀವನ ನಡೆಸ್ತಾ ಇದ್ದೆ. ಅವರದು ಒಂದು ತರಹ ವಿಚಿತ್ರ ಸ್ವಭಾವ. ನನ್ನ ಜೊತೆ ಸರಿಯಾಗಿ ಮಾತಾಡ್ತಾನೇ ಇರಲಿಲ್ಲ. ಯಾಕೆ ಹೀಗೆ ಮಾಡ್ತೀರ ಅಂತ ಕೇಳಿದ್ರೆ ಉತ್ತರ ಕೊಡ್ತಾ ಇರಲಿಲ್ಲ. ನಮ್ಮ ಮನೆನಲ್ಲಿ ನಾನು, ನನ್ನ ಗಂಡ ಮಾತ್ರ ಇದ್ದದ್ದು. ಅವರು ಆಫೀಸಿಗೆ ಹೋದ ಮೇಲೆ ನನಗೆ ಬೇಜಾರ ಆದಾಗ ಅಕ್ಕ-ಪಕ್ಕದವರನ್ನು ಪರಿಚಯ ಮಾಡಿಕೊಂಡು ಅವರತ್ತಿರ ಮಾತಾಡಿಸೋಕೆ ಪ್ರಾರಂಭಿಸಿದೆ. ಅದಕ್ಕೆ ಅವರು ಹೀಗೆ ಅಕ್ಕ-ಪಕ್ಕದವರನ್ನು ಮಾತಾಡಿಸೋದು ಒಳ್ಳೆ ಹೆಂಗಸಿನ ಲಕ್ಷಣ ಅಲ್ಲ ಅಂತಿದ್ರು. ಅದಕ್ಕೆ ನಾನು ನಾನೇನು ಮಾಡಲಿ. ನನಗೆ ಮನೆಯಲ್ಲಿ ಇದ್ದು ಬೇಜಾರು ಅದಕ್ಕೆ ಅವರ ಮಾತಾಡ್ಸಿತ್ತೀನಿ. ಅಂದದಕ್ಕೆ ಇದೇ ಮೊದಲು ಮತ್ತು ಕೊನೆ. ನೀನು ಇನ್ನೂ ಮುಂದೆ ಯಾರಾತ್ರಾನು ಮಾತಾಡಬಾರ್ದು ಅಂತ ಕಟ್ಟಪ್ಪಣೆ ಮಾಡಿದ್ರು, ನಾನು ಅಷ್ಟಕ್ಕೆ ಸುಮ್ಮನೆಯಾದೆ. ನನಗೆ ಒಂದು ಗಂಡು ಮಗು ಆಯ್ತು. ನಂತರ ಇನ್ನೊಂದು ಹೆಣ್ಣು ಮಗು ಆಯ್ತು. ಈ ಮಕ್ಕಳನ್ನ ನೋಡಿಕ್ಳೊದ್ರಲ್ಲಿನೆ ಟೈಮ ಸಾಕಾಗಿ ಹೋಗ್ತಿತ್ತು. ಹಾಗಾಗಿ ಟೀಫಿನ್, ಊಟ ಮಾಡೋದು (ತಯಾರಿಸುವುದು) ಲೇಟಾಗ್ತ ಇತ್ತು. ಅದಕ್ಕೆ ನಿನಗೆ ಸಂಸಾರ ಹೇಗೆ ನೋಡಿಕೊಂಡು ಹೋಗಬೇಕು ಅಂತ ಗೊತ್ತಿಲ್ಲ. ಅಂತವಳು ಮದುವೆ ಯಾಕಾದೆ ಎಂದೆಲ್ಲ. ಬೈತಾಯಿದ್ರು. ಮನೆನಲ್ಲಿ ಪ್ರತಿಯೊಂದು ಕೆಲಸನೂ ನಾನೇ ಮಾಡಬೇಕಾಗಿತ್ತು. ಇದರಲ್ಲಿ ಸ್ವಲ್ಪ ವ್ಯತ್ಯಾಸವಾದ್ರು ನನ್ನ ಮೇಲೆ ಸಿಡಿಮಿಡಿ ಮಾಡ್ತಾ ಇದ್ರು. ನಾನು ಮದುವೆಯಾಗಿ ಎರಡು ಮಕ್ಕಳ ತಾಯಿಯಾದ್ರು ನನ್ನ ಜೊತೆ ಒಂದಿನಾನು ಪ್ರೀತಿಯಿಂದ ಮಾತಾಡೇ ಇಲ್ಲ. ತನಗೆ ಬೇಕಾದನ್ನ ನನ್ನಿಂದ ತಗೋತ ಇದ್ರೇ ವಿನಃ, ನನ್ನ ಪ್ರೀತಿಯಿಂದ ಮಾತಾಡಿಸಬೇಕು ಅಂತ ಒಂದಿನಾನು ಅನ್ನಿಸಲಿಲ್ಲ. ಎಷ್ಟು ದಿನ ಅಂತಾ ಅಂಥವನ ಜೊತೆ ಬದುಕ ಬೇಕೀಳಿ ಅದಕ್ಕೆ ಅಂಥವನ ಜೊತೆ ಬದುಕೊದಕ್ಕಿಂತ ಬೇರೆಯಾ ಗೋದೆ ವಾಸಿ ಎನಿಸಿ, ಅವನಿಂದ ವಿಚ್ಛೇದನೆ ಪಡೆದೆ" ಎಂದು ಹೇಳುತ್ತಾರೆ. ನಿಮ್ಮ ಗಂಡನಿಂದ ಜೀವನಾಂಶ ಸಿಗ್ತಾ ಇದೇನಾ? "ಪ್ರತಿ ತಿಂಗಳು ತಪ್ಪದೇ ಜೀವನಾಂಶ ತಗೋತಾಯಿದ್ದೀನಿ. ಇದುವರೆಗೂ ಯಾವುದೇ ತೊಂದರೆಯಾಗಿಲ್ಲ. ಈ ಜೀವನಾಂಶದ ಜೊತೆ ನಾನು ಅಲಂಕಾರಿಕ ವಸ್ತುಗಳನ್ನು ಮಾಡಿ ಮಾರೊದಿಂದ್ರ ಅದರಿಂದನೂ ಹಣ ಬರುತ್ತೆ. ಆಗಾಗಿ ಹಣದ ತೊಂದರೆಯಾಗಿಲ್ಲ". ಮಕ್ಕಳು ಯಾರ ಹತ್ತಿರ ಇದಾರೆ? ಎಂಬ ಪ್ರಶ್ನೆಗೆ ನನ್ನ ಮಗ ಅವರತ್ರಾನೇ ಇದಾನೆ, ಮಗಳು ನನ್ನ ಹತ್ರ ಇದ್ದಾಳೆ". ವಿಚ್ಛೇದನೆ ನಂತರ ನಿಮ್ಮ ಜೀವನದ ಬಗ್ಗೆ ನಿಮಗೇನಸ್ತಾ ಇದೆ. ಅಂತ ಕೇಳಿದ್ದಕ್ಕೆ "ಹೊಡೆಯೋದು ಬಡಿಯೋದು ಹೇಗೂ ಸಹಿಸಿಕೊಂಡು ಜೀವನಾನ ಮಾಡಬಹುದು. ನಾಲ್ಕು ಗೋಡೆಗಳ ಮಧ್ಯೆ ಮಾನಸಿಕವಾಗಿ ನೋವು ಅನುಭವಿಸುವುದಿದೆಯಲ್ಲ ತುಂಬಾ ಕೆಟ್ಟದ್ದಾಗಿರುತ್ತೆ. ನಾನು ವಿಚ್ಛೇದನೆ ಪಡೆದ ನಂತರ ನನ್ನ ತಂದೆ-ತಾಯಿಯವರ ಹತ್ತಿರ ಹೋಗದೇ ಪ್ರತ್ಯೇಕವಾಗಿದ್ದೀನಿ. ನೆಮ್ಮದಿಯಾಗಿ ಜೀವನ ಮಾಡ್ತಾ ಇದೀನಿ". ಅಂತಾರೆ. ನೀವು ವಿಚ್ಛೇದನೆ ಪಡೆದ ನಂತರ ನಿಮ್ಮ ಬಗ್ಗೆ ಯಾರಾದ್ರು ಏನಾದ್ರು ಅಂದದುಂಟೆ?

ಬೇರೆಯವರು ಯಾರಾದ್ರು ಅಂದರೋ ಇಲ್ಲ ಗೊತ್ತಿಲ್ಲ. ನನ್ನ ಸಂಬಂಧಿಕರೆ ಗಂಡನ ಬಿಟ್ಟು ಬಂದು ಅದೇನ ಜೀವನ ಮಾಡ್ತಾಳೊ ಅದರಲ್ಲೂ ಹೆಣ್ಣು ಮಗುನ ಕಟ್ಕೊಂಡು ಅಂತಾರ. ಹಾಗೆ ನಾನು ನನ್ನ ಮಗಳು ಯಾವುದಾದರೂ ಮನೆನಲ್ಲಿ ನಡೆಯೋ ಕಾರ್ಯಕ್ರಮಕ್ಕೊದ್ರೆ ಇವಳು ಹೀಗೆ ನೋಡು ಅಂಥ ಅಂತಾನೆ ಇರ್ತಾರೆ".

**ಪ್ರಕರಣ-೫**

೩೪ ವರ್ಷದ ಶಾರದ ಇವರು ಪಿ.ಯು.ಸಿ.ವರೆಗೂ ಓದಿದ್ದಾರೆ. ಇವರು ವಿಚ್ಛೇದನೆ ಪಡೆದು ಜೀವನ ನಡೆಸುತ್ತಿರುವಂತಹ ಮಹಿಳೆ. ಇವರಿಗೆ ವಿವಾಹವಾದಾಗ ೨೫ ವರ್ಷಗಳಿದ್ದವೆನ್ನುತ್ತಾರೆ. ಇವರ ವಿವಾಹ ಕೃಷ್ಣ ಎನ್ನುವವನೊಂದಿಗೆ ನೆರವೇರಿದೆ. ಇವರುಗಳು ವಿವಾಹ ನೆರವೇರಿ ೯ ವರ್ಷವಾಗಿದ್ದು, ಇವರು ವಿಚ್ಛೇದನೆ ಪಡೆದು ೩ ವರ್ಷ ಕಳೆದಿದೆ. ಯಾವ ಕಾರಣಕ್ಕೆ ನೀವು ವಿಚ್ಛೇದನೆ ಪಡೆದಿರಿ ಎಂದು ಕೇಳಿದ್ದಕ್ಕೆ, "ನನ್ನ ಗಂಡಂಗೆ ಅನುಮಾನ ಪಡೋ ಬುದ್ಧಿ. ಅದಕ್ಕಾಗಿ ನನಗೆ ಹಿಂಸಿಸ್ತಾ ಇದ್ದಾ". ಯಾವ ಕಾರಣಕ್ಕೆ ನಿಮ್ಮ ಗಂಡ ಅನುಮಾನ ಪಡ್ತಾ ಇದ್ರು ಎಂಬ ಪ್ರಶ್ನೆಗೆ "ನನ್ನ ಮದುವೆಗೂ ಮುಂಚೆ ನನ್ನ ತಂಗಿ ಮದುವೆ ನಡೆದಿತ್ತು. ನನ್ನ ತಂಗಿನ ನನ್ನ ಸೋದರ ಮಾವನಿಗೆ ಕೊಡಲಾಗಿತ್ತು. ಮೊದಲು ನನ್ನ ಮಾವನಿಗೆ ಮದುವೆ ಮಾಡಬೇಕು ಅನ್ನಕೊಂಡು ಇಬ್ಬರದು ಜಾತಕನ ನೋಡಿದ್ರು. ಇಬ್ಬರದು ಜಾತಕ ಕೂಡಿ ಬರಲಿಲ್ಲ. ನಮ್ಮ ತಂಗಿ ಜಾತಕ ಕೂಡಿ ಬಂತು. ಅದಕ್ಕೆ ನಮ್ಮ ತಂಗಿ ಮದುವೆ ಬೇಗ ನಡೆದೋಯ್ತು. ಈ ವಿಷಯ ಗೊತ್ತಿದ್ದು, ನನ್ನ ಮದುವೆಯಾದ್ರು ಪದೇ ಪದೇ ನೀನು ಸರಿಯಿಲ್ಲ. ಅದಕ್ಕೆ ನಿಮ್ಮ ಮಾವ ನಿನ್ನ ಬಿಟ್ಟು, ನಿಮ್ಮ ತಂಗಿನ ಮದುವೆಯಾಗಿದ್ದಾನೆ. ನಿನ್ನ ನನಗೆ ಮೋಸ ಮಾಡಿ ಗಂಟಾಕಿದಾರೆ ಅಂತ ಅಂತಿದ್ದ. ಅಲ್ಲದೇ ನನ್ನ ಯಾವಾಗ್ಲೂ ಅನುಮಾನದಿಂದನೇ ನೋಡ್ತಾ ಇದ್ದ. ನಾನು ಪಾತ್ರೆ ತೊಳೆಯೊಕೆ, ಕಸಗುಡಿಸೋಕೆ ಅಥವಾ ಬಟ್ಟೆ ತೊಳೆಯೋಕೆ ಅಂತ ಹೊರಗೆ ಬಂದರೆ, ಯಾಕೆ ಹೊರಗೆ ಬಂದಿಯಾ, ಯಾರಾದ್ರು ಬರ್ತೀನಿ ಅಂತ ಹೇಳಿದರೇನು ಅಂತಾ ಕೇಳ್ತಾ ಇದ್ದ. ನಾನು ಹೊರಗಿದ್ದಂಥ ಸಂದರ್ಭದಲ್ಲಿ ಯಾರಾದ್ರು, ಗಂಡ್‌ಮಕ್ಕಳು ಹೋದ್ರೆ, ಅವನು ಯಾಕ್ ಈಗ್ಲೆ ಹೋದ. ನೀನು ಹೊರಗಿರಬೇಕಾದ್ರೆ ಅವನು ಹೋಗಿದಾನೆಂದರೆ ಅವನಿಗೂ ನಿನಗೂ ಏನೋ ಸಂಬಂಧ ಇದೆ. ಅದಕ್ಕೆ ನೀನು ಹೊರಗೆ ಬಂದಿ ಅಂತಂದು ನನ್ನ ಹೊಡಿತಾ ಇದ್ದ. ಇಲ್ಲಂದ್ರೆ ಬೆಂಕಿ ಕೆಂಡಗಳನ್ನು ತಂದು ನನ್ನ ಕೈಮೇಲೆ ಇಡ್ತಾ ಇದ್ದ. ಇದನ್ನೇನಾದ್ರು ಅವರ ತಮ್ಮಂದಿರು, ಬಿಡಿಸೊಕೆ ಬಂದ್ರೆ, ಇದು ಗಂಡ-ಹೆಂಡತಿ ವಿಷಯ ನೀವ್ಯಾರು ಇಲ್ಲಿ ತಲೆ ಹಾಕಬೇಡಿ ಅಂತ ಅವರನ್ನು ಬಾಯಿಗೆ ಸಿಕ್ಕಂಗೆ ಬೈತಾ ಇದ್ದ. ಅದಕ್ಕೆ ಅವರು ಸುಮ್ನೆ ಇರ್ತಿದ್ರು. ನಾನು ಅಡುಗೆ ಮಾಡೋಕೆ ಅಡುಗೆ ಮನೆನಲ್ಲಿ ಇದ್ದಾಗ ಆತನ ತಮ್ಮಂದಿರು ಅಡಿಗೆ ಮನೆಗೆ ಬಂದ್ರೆ ಅಥವಾ ನನ್ನ ಮಾತಾಡಿಸಿದ್ರೆ ಇಲ್ಲಂದ್ರೆ ನನ್ನ ನೋಡಿ ನಕ್ರೆ ಯಾಕ ನೀನು ಅಡುಗೆ ಮನೆನಲ್ಲಿ ಇದ್ದಂತ ಸಂದರ್ಭದಲ್ಲಿ ಅವರು ಬಂದ್ರು ಯಾಕ್ ನಿನ್ನ ಮಾತಾಡಿಸಿದ್ರು, ಯಾಕ್ ನಿನ್ನ ನೋಡಿ ನಕ್ರು. ನೀನ್ ಯಾಕ್ ಅವರನ್ನ ಮಾತಾಡ್ಸಿದಿ, ನೀನು ಯಾಕ್ ಅವರನ್ನ ನೋಡಿ

ನಕ್ಕಿ. ಅಂತಂದು ತನ್ನ ಕೈಯಲ್ಲಿ ಏನು ಇರುತ್ತೋ. ಅದನ್ನ ತಗೊಂಡು ತಲೆಗೆ ಹೊಡಿತಾ ಇದ್ರು. ರಕ್ತಾ ಬಂದು ಗಾಯ ಆದ್ರು ಆಸ್ಪತ್ರೆಗೆ ಕರಕೊಂಡು ಹೋಗ್ತಾ ಇರಲಿಲ್ಲ. ಮನೆನಲ್ಲಿರೊ ಅರಿಶಿನ ಪುಡಿ ಅಚ್ಚಿಕೊಂಡೇ. ಅದನ್ನ ವಾಸಿ ಮಾಡಿಕೊಳ್ಳುತ್ತಿದ್ದೆ. ನನ್ನ ಗಂಡ ಕಾರ್ಪೆಂಟರ್ ಕೆಲಸ ಮಾಡ್ತಾ ಇದ್ದ. ಸೋಮಾರಿಯಾದ್ದರಿಂದ ಕೆಲಸ ಸರಿಯಾಗಿ ಮಾಡ್ತಾ ಇರಲಿಲ್ಲ. ಸಂಪಾದನೆನೂ ಅಷ್ಟಕ್ಕಷ್ಟೆ. ಬಂದ ಅಲ್ಪಸ್ವಲ್ಪ ಹಣನು ಮನೆಗೆ ಕೊಡದೇ ಕುಡಿತಾ ಇದ್ದ. ಹೀಗಾಗಿ ನಾನು ಎಷ್ಟೋ ಸಾರಿ ಉಪವಾಸದಿಂದ ಇದ್ದೀನಿ. ಮೂರು ಜನ ಹೆಣ್ಣು ಮಕ್ಕಳೇ ಹುಟ್ಟಿದ್ದರಿಂದ ನೀನು ಸರಿಯಾಗಿಲ್ಲ. ನೀನು ಸರಿಯಾಗಿದ್ದಿದ್ರೇ ನಿನಗೆ ಗಂಡು ಹುಟ್ಟುತ್ತಿತ್ತು. ನೀನು ಸರಿ ಇಲ್ಲದ್ದಕ್ಕೆ ಬರೀ ಹೆಣ್ಣಾಗಿದಾವಾ ಅಂತದ್ದು, ಬೈಯೋದು, ಹೊಡೆಯೋದು ಮಾಡ್ತಾ ಇದ್ದ. ನಾನು ನಾಲ್ಕನೇ ಬಾರಿ ಗರ್ಭಿಣಿಯಾಗಿದ್ದಾಗ ನನ್ನ ಹೊಟ್ಟೆಗೆ ಕಾಲಿಂದ ಒದ್ದಿದ್ದ ಹಂಗಾಗಿ ನನಗೆ ರಕ್ತ ಬರೋದಕ್ಕೆ ಪ್ರಾರಂಭವಾಯಿತು. ಆವಾಗ ನಿಮ್ಮ ಮಗಳು ಕಟ್ಟೆ ಮೇಲಿಂದ ಬಿದ್ದಿದಾಳೆ ಅಂತ ನಮ್ಮ ಅಪ್ಪ-ಅಮ್ಮನಿಗೆ ಹೇಳಿ ಕಳಿಸಿ, ನನ್ನ ಅಲ್ಲಿಂದ ನನ್ನ ತವರು ಮನೆಗೆ ಕಳಿಸಿದ. ನಾನು ತವರು ಮನೆಗೆ ಬಂದ ಮೇಲೆ ನಿರ್ಧಾರ ಮಾಡಿದ್ದೆ. ಅವನ ಜೊತೆ ಹೋಗಬಾರ್ದು, ಅವನು ನನಗೆ ಕೊಡೋ ಎಲ್ಲ ಹಿಂಸೆನು ನಮ್ಮ ತವರ ಮನೆಯವರಿಗೆ ಹೇಳಿ ಬಿಡೋಣ ಅಂತ ನಿರ್ಧಾರ ಮಾಡಿದ್ದೆ. “ನನ್ನ ಗಂಡನ ಹಿಂಸೆಯಲ್ಲದೆ ನಮ್ಮ ಮಾವನ ಕಾಟನು ನಾನು ಅನುಭವಿಸಿದೀನಿ. ನನ್ನ ಮಾವನ ಬುದ್ಧಿ ಸರಿ ಇರ್ಲಿಲ್ಲ. ನನ್ನ ಜೊತೆ ಕೆಟ್ಟ ರೀತಿನಲ್ಲಿ ನಡಕೋತಾ ಇದ್ದ. ನನಗೊಂದೆಯಲ್ಲ, ನನ್ನ ಮೈದುನರ ಹೆಂಡ್ತಿರಾ ಜೊತೆನು ಹಾಗೆ ನಡಕೋತಾ ಇದ್ದ. ನಾವು ಸ್ನಾನ ಮಾಡಬೇಕಾದ್ರೆ, ಬಟ್ಟೆ ಬದಲಾಯಿಸಬೇಕಾದ್ರೆ ಕದ್ದು ನೋಡ್ತಾ ಇದ್ದ. ಈ ವಿಷಯ ನಮಗೆ ಮುಂಚೆ ಗೊತ್ತಾಗಿರಲಿಲ್ಲ. ನಂತರ ಗೊತ್ತಾಗಿ ನಾವೇ ಹುಷಾರಾದ್ವಿ. ಈ ವಿಷಯ ನನ್ನ ಗಂಡಂಗೆ ತಿಳಿಸಬೇಕು ಅನ್ನಕೊಂಡಿದ್ದೆ. ಆದ್ರೆ ಭಯ ಆಗಿ ಹೇಳಿರಲಿಲ್ಲ. ನನ್ನ ಗಂಡ, ಮಾವ ಇಂಥವರ ಜೊತೆ ಬದುಕೋದಕ್ಕಿಂತ ಬೇರೆಯಾಗದೇ ವಾಸಿ ಎನಿಸಿ, ಬೇರೆಯಾಗೋಕೆ ನಿರ್ಧಾರ ಮಾಡಿದ್ದೆ. ಆದ್ರೆ ಅಷ್ಟರಲ್ಲಿ ನನ್ನ ಗಂಡ ಬಂದು ಕರೆದ. ನಾನು ಬರೋದಿಲ್ಲ ಅಂದಾಗ ಶಾರದ ನಾನು ತುಂಬಾ ತಪ್ಪು ಮಾಡಿದೀನಿ ಇನ್ನ ಮುಂದೆ ನಿನಗೆ ಹೊಡೆಯೋದಿಲ್ಲ, ಏನು ಅನ್ನೋದಿಲ್ಲ, ನಾವಿಬ್ರು ನಮ್ಮ ಮಕ್ಕಳ ಜೊತೆ ಸುಖವಾಗಿ ಇರೋಣ ಅಂತಂದ. ನಾನು ಬದಲಾಗಿರಬೋದು ಬಿಡು ಅನ್ನಕೊಂಡು ಅವನ ಜೊತೆ ಹೋದೆ. ಹೋಗಿ ಒದು ದಿನ ಚೆನ್ನಾಗಿದ್ದ. ಆಮೇಲೆ ಮತ್ತೆ ನನ್ನ ಹೊಡೆಯೋಕೆ ಪ್ರಾರಂಭಿಸಿದ. ಈ ಮನುಷ್ಯ ಎಷ್ಟು ಕೆಟ್ಟೋನು ಅಂದ್ರೆ. ನಾನು, ನಮ್ಮ ಸಂಬಂಧಿಕರು, ಹುಡುಗರ ಜೊತೆ ಪೋಟೋ ತೆಗೆಸಿಕೊಂಡ. ಪೋಟೋ ನೋಡಿ, ಆ ಪೋಟೋದಲ್ಲಿ ಅವನ್ಯಾಕಿದ್ದಾನೆ. ಅವನಿಗೂ ನಿನಗೂ ಏನದ್ರಾ ಸಂಬಂಧ ಇತ್ತೇನು ಅಂತ ಕೇಳ್ತಾ ಇದ್ದ. ಒಂದೊಂದು ಸಾರಿ ನೀನು ಅವತ್ತು ಅವನೋಡಿ ನಕ್ಕಿದೆಲ್ಲ ಅಂತ ಹೊಡಿತಾ ಇದ್ದ. ಅವನಿಗೆ ಮಕ್ಕಳ ಬಗ್ಗೇನೂ ಚಿಂತೆ ಇರ್ಲಿಲ್ಲ. ಅವು ಉಪವಾಸದಿಂದ ಇದ್ರು ಅವನು ಅವುಗಳ ಬಗ್ಗೆ ಯೋಚ್ನೆ ಮಾಡ್ತಾ ಇರ್ಲಿಲ್ಲ. ಈ ಮಧ್ಯೆ ನನಗೆ ಈ ಕೆಲಸ ಸರಿ ಹೋಗಲ್ಲ. ನಿಮ್ಮ ತವರು ಮನೆಯಿಂದ ೫ ಸಾವಿರ ಇಸ್ಕೊಂಡು ಬಂದು ಕೊಡು ಅಂತಂದ. ನನಗೂ ನನ್ನ ತವರ ಮನೆಗೆ ಹೇಗಾದ್ರೂ ಮಾಡಿ ಹೋಗಬೇಕು. ಮೊದಲು ನಂಗೆ ಇಲ್ಲಿಂದ

ಹೋಗೋಕೆ ಅವಕಾಶ ಸಿಕ್ಕರೆ ಸಾಕು ಎನಿಸಿ, ಸರಿ ದುಡ್ಡು ಇಸಕೊಡ್ತೀನಿ ಅಂತ ಹೇಳ್ದೆ. ಅದಕ್ಕೆ ನನ್ನ ತವರು ಮನೆಗೆ ಕರಕೊಂಡು ಬಂದ ನಾನು ತವರು ಮನೆಗೆ ಬಂದ ಮೇಲೆ ಅಪ್ಪ - ಅಮ್ಮಂಗೆ ಎಲ್ಲ ವಿಷಯ ತಿಳಿಸಿ, ಅವನ ಜೊತೆ ಹೋಗೋದಿಲ್ಲ. ನನ್ನ ಪಾಡಿಗೆ ನಾನು ನನ್ನ ಮಕ್ಕಳನ್ನು ಕರಕೊಂಡು ನಾಲ್ಕು ಮನೆ ಪಾತ್ರೆ ತೊಳೆದರ ಜೀವನ ಮಾಡ್ತೀನಿ ಅಂತೆಂದ್ದೆ. ಹಾಗಾಗಿ ನಮ್ಮನೆಯವರೆಲ್ಲ ಸೇರಿ ಕೋರ್ಟಿನಲ್ಲಿ ಅರ್ಜಿ ಹಾಕಿಸಿದರು. ಅರ್ಜಿ ಹಾಕಿ ಒಂದು ವರ್ಷ ಮೂರು ತಿಂಗಳಿಗೆ ನಂಗೆ ಅವನಿಂದ ಬಿಡುಗಡೆ ಸಿಕ್ಕಿತು. ಈಗ ಮಕ್ಕಳು ನನ್ನ ಹತ್ರಾನೇ ಇದ್ದಾವೆ". ವಿಚ್ಛೇದನೆ ಪಡೆದ ನಂತರ ನಿಮ್ಮ ಜೀವನದ ಬಗ್ಗೆ ಹೇಗೆ ಅನ್ನಿಸ್ತಾ ಇದೆ. "ನನಗೆ ಈಗ ಯಾವ ಭಯನೂ ಇಲ್ಲ. ನಾನು ನನ್ನ ಗಂಡನ ಮನೇನಲ್ಲಿ ಇದ್ದಾಗ ನನ್ನ ಗಂಡ ಹೊಡಿತಾನೇನೂ ಅಂತಾ ರಾತ್ರಿಯೆಲ್ಲ ನಿದ್ದೆನೇ ಮಾಡ್ತಾ ಇರ್ಲಿಲ್ಲ. ಆದ್ರೆ ಈಗ ಕಣ್ ತುಂಬಾ ನಿದ್ದೆ ಮಾಡ್ತಾ ಇದೀನಿ. ನನ್ನ ಗಂಡ ನಾನು ವಿಚ್ಛೇದನೆ ಪಡೆದಾಗ ನೀನು ಹೇಗೆ ಬದುಕುತ್ತೀಯಾ ಅಂತ ನಾನು ನೋಡ್ತೀನಿ. ಒಂಟಿ ಹೆಂಗಸು ಬದುಕೋದು ಎಷ್ಟು ಕಷ್ಟ ಅಂತ ನಿನಗೆ ಆಮೇಲೆ ಗೊತ್ತಾಗುತ್ತೇ ಅಂದಿದ್ದ. ಅದಕ್ಕೆ ನಾನು ಹುಡುಗಿಯರ ಹಾಸ್ಟೇಲಿನಲ್ಲಿ ಕೆಲಸಕ್ಕೆ ಸೇರಿ ನಾನು ಬದುಕಬಲ್ಲೆ ಅಂತಾ ತೋರಿಸಿ ಕೊಟ್ಟೀದೀನಿ. ಇದು ನನಗೆ ತುಂಬಾ ಸಂತೋಷ ತಂದಿದೆ. ನಾನೇ ಸಂಪಾದನೆ ಮಾಡಿ ಸ್ವತಂತ್ರವಾಗಿ ಯಾರದೂ ಹಂಗಿಲ್ಲದೇ ನನ್ನ ಜೀವನ ನಾನು, ನನ್ನ ಮಕ್ಕಳ ಜೊತೆ ಕಳಿತಾ ಇದ್ದೀನಿ. ಈಗ ಸಧ್ಯ ನನ್ನ ತವರು ಮನೆನಲ್ಲಿ ಇದೀನಿ. ನನ್ನ ಅಪ್ಪ-ಅಮ್ಮ ನಂಗೆ ಏನೂ ಅಂದಿಲ್ಲ. ಆದರೆ ನನ್ನ ತಮ್ಮ ಒಂದೊಂದು ಸಾರಿ ನೀನು ಇನ್ನೂ ಎಷ್ಟು ದಿನ ಇಲ್ಲೇ ಇರ್ತೀಯಾ ಅಂತ ಕೇಳ್ತಾನೆ. ನನಗೆ ಆವಾಗ ತುಂಬಾ ಬೇಸರ ಅನಿಸುತ್ತೆ". ನಿಮ್ಮ ಗಂಡನಿಂದ ನಿಮಗೆ ಯಾವುದೇ ಬಗೆಯ ಹಣದ ಸಹಾಯ ದೊರೆತಿದೇನಾ? ಅಂದದ್ದಕ್ಕೆ "ಅವನ್ಗೆ ತಿನ್ನೋದಕ್ಕೆ ಗತಿಯಿಲ್ಲ. ಇನ್ನೂ ನನಗೆ ಎಲ್ಲಿಂದ ಕೊಡ್ತಾನೆ" ಎಂದು ಹೇಳುತ್ತಾರೆ. ಮತ್ತೊಂದು ಮದುವೆಯಾಗೋದ್ರ ಬಗ್ಗೆ ಏನಂತೀರಾ? "ಒಂದು ಮದುವೆ ಮಾಡಿಕೊಂಡು ಅನುಭವಿಸಿದ್ದೆ ಸಾಕು. ಇನ್ನೂ ಇನ್ನೊಂದು ಮದುವೆ ಯಾಕಮ್ಮ. ನಾವು ಮದುವೆಯಾಗ್ತೀವಿ ಅಂದ್ರು ನಮ್ಮಂಥವರನ್ನು ಯಾರು ಮದುವೆಯಾಗ್ತಾರಮ್ಮ" ಎಂದು ಮಾತು ಮುಗಿಸಿದರು.

**ಪ್ರಕರಣ-೬**

ಮೂವತ್ಮೂರು ವರ್ಷದ ಶಾಂತಿಯವರ ವಿವಾಹವು ಮಂಜುನಾಥ ಎನ್ನುವವರೊಂದಿಗೆ ನೆರವೇರಿದ್ದು, ಇವರು ಶಿಕ್ಷಿಕಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ಗಂಡ ಬ್ಯಾಂಕ್ ಒಂದರಲ್ಲಿ ಕ್ಯಾಷಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ವಿವಾಹವಾಗಿ ಹತ್ತು ವರ್ಷಗಳಾಗಿದ್ದು, ವಿಚ್ಛೇದನೆ ಪಡೆದು ೪ ವರ್ಷಗಳಾಗಿದೆ. ಯಾವ ಕಾರಣಕ್ಕೆ ವಿಚ್ಛೇದನೆ ಪಡೆದಿರಿ? ಎಂದು ಕೇಳಿದರೆ, "ನಾನು ಕೆಲಸಕ್ಕೆ ಹೋಗುವಾಗ ನನ್ನ ನೋಡಿ ಇಷ್ಟಪಟ್ಟರು. ಅವರೇ ಅವರ ಮನೆಯವರನ್ನ ನಮ್ಮನೆಗೆ ಕರಕೊಂಡು ಬಂದು ನನ್ನ ಮದುವೆ ಮಾಡಿಕೊಳ್ತೀನಿ ಅಂತ ಕೇಳಿದ್ರು. ಅವರದು ನಮ್ಮದು ಒಂದೇ ಜಾತಿಯಾಗಿದ್ದರಿಂದ ಹಾಗೆ

ಅವರು ಕೆಲಸ (ಸರ್ಕಾರಿ ನೌಕರಿ) ಮಾಡ್ತ ಇದ್ದಿದ್ದರಿಂದ ನಮ್ಮನೆನಲ್ಲಿ ಮದುವೆ ಮಾಡೋಕೆ ಒಪ್ಪಿಕೊಂಡು, ನನ್ನ ಮದುವೆನಾ ಅವರ ಜೊತೆ ಮಾಡಿದ್ರು. ನನ್ನ ಮದುವೆ ಮಾಡಿಕೊಳ್ಳೋಕೆ ಅವರ ಮಾಡಿದ ಪ್ರಯತ್ನ ಅಷ್ಟಿಷ್ಟಲ್ಲ. ಯಾವಾಗ ನಾನು ಅವರ ಹೆಂಡ್ತಿ ಆದ್ನೋ ಮುಗಿತು, ನನ್ನ ಬಗ್ಗೆ ಮುಂಚೆ ಇದ್ದ ಪ್ರೀತಿ ಅವರಲ್ಲಿ ಮದುವೆಯಾದ ಮೇಲೆ ಕಂಡು ಬರಲಿಲ್ಲ. ನನ್ನ ಬಗ್ಗೆ ಅಲಕ್ಷ್ಯ ತೋರಿಸೋಕೆ ಪ್ರಾರಂಭಿಸಿದರು. ಮದುವೆಯಾಗಿ ಸುಮಾರು ಒಂದು-ಒಂದೂವರೆ ವರ್ಷವಾಗಿರಬಹುದು. ನನ್ನ ಜೊತೆ ಸರಿಯಾಗಿ ಮಾತಾಡ್ತ ಇರಲಿಲ್ಲ. ಅಲ್ಲದೆ ನನ್ನ ಮದುವೆನಲ್ಲಿ ವರದಕ್ಷಿಣೆ ತಗೊಂಡಿಲ್ಲ, ನೀನು ನಿಮ್ಮ ತಂದೆ ಮನೆಗೆ ಹೋಗಿ ಹಣ ತಗೊಂಡು ಬಾ ಅಂತಿದ್ರು. ಅದಕ್ಕೆ ನಾನು ಅವರಿಗೆ ನಿಮಗೆ ವರದಕ್ಷಿಣೆ ಬೇಕಾಗಿದ್ರೆ ಮದುವೆಗೆ ಮುಂಚೆ ನಂಗೆ ವರದಕ್ಷಿಣೆ ಬೇಕು ಅಂತ ಕೇಳಬೇಕಾಗಿತ್ತು ಅಂತಂದ್ರೆ, ಆಗ ನಂಗೆ ನಿನ್ನ ಮದುವೆಯಾಗೋದೆ ಮುಖ್ಯವಾಗಿತ್ತು ಅದಕ್ಕೆ ಕೇಳಿರಲಿಲ್ಲ. ಈಗ ನಂಗೆ ಹಣ ಬೇಕು. ಅದಕ್ಕೆ ತಗೊಂಡು ಬಾ ಅಂತಾ ಇದ್ರು. ನಿಮಗ್ಯಾಕೆ ವರದಕ್ಷಿಣೆ? ತಿಂಗಳ ತಿಂಗಳ ಸಂಬಳ ತರೊ ಮಗಳನ್ನೇ ಮದುವೆ ಮಾಡಿಕೊಟ್ಟಿಲ್ಲವೇನು ಅಂದ್ರೆ, ನನಗೆ ಎದುರು ಮಾತಾಡ್ತಿಯ ಅಂತ ಕೆನ್ನೆಗೆ ಹೊಡೀತಾ ಇದ್ರು. ಪ್ರಾರಂಭದಲ್ಲಿ ನನ್ನ ಸಂಬಳಾನ ಕೇಳ್ತಾ ಇರ್ಲಿಲ್ಲ. ನಂತರದಲ್ಲಿ ನಿನ್ನ ಸಂಬಳ ಪೂರ್ತಿ ನನಗೆ ತಂದುಕೊಡು ಇಲ್ಲಂದ್ರೆ ನಿನ್ನ ಏನ್ ಮಾಡ್ತಿನೋ ನಂಗೆ ಗೊತ್ತಿಲ್ಲ ಅಂತಿದ್ರು". ನಿಮ್ಮ ಗಂಡಂಗೆ ಯಾವುದಾದ್ರೂ ದುರಾಭ್ಯಾಸ ಇತ್ತಾ? "ಇಲ್ಲ ಅವರಿಗೆ ಯಾವುದೇ ತರಹದ ಕೆಟ್ಟ ಹವ್ಯಾಸ ಇರ್ಲಿಲ್ಲ. ಆದ್ರು ಯಾಕೆ ಹೀಗೆ ಮಾಡ್ತರೆ ಅಂತ ಗೊತ್ತಾಗ್ತನೆ ಇರ್ಲಿಲ್ಲ. ಯಾಕೆ ಹೀಗೆ ಮಾಡ್ತಿರ ಅಂತ ಕೇಳಿದ್ರೆ ಮುಂಚೆ ನೀನ ತುಂಬಾ ಇಷ್ಟಾ ಆಗಿದ್ದೆ. ಈಗ ನನಗೆ ನಿನ್ನ ಬಗ್ಗೆ ಆಸಕ್ತಿ ಕಡಿಮೆಯಾಗ್ತ ಇದೆ ಅಂತಾ ಹೇಳ್ತಾ ಇದ್ರು. ನಾನು ಕೆಲಸ ಮಾಡ್ತಿದ್ದರಿಂದ ಸಂಜೆನೆ ಮನೆಗೆ ಬರ್ತಾ ಇದ್ದೆ. ಅವರುನೂ ಸಂಜೆ ಬರ್ತಾ ಇದ್ರು. ನಾನು ಮನೆಗೆ ಬಂದ ಮೇಲೆ ಅಡುಗೆ ಮಾಡೋದು, ಮಗುನ ನೋಡಕೊಳ್ಳೋದು, ಎರಡೂ ಮಾಡಬೇಕಿತ್ತು. ನನ್ನ ಅತ್ತೆ-�ಾವ ನಮ್ಮ ಜೊತೆ ೪ ತಿಂಗಳ ಮಾತ್ರ ಇರ್ತಿದಿದ್ದು. ಇನ್ನ ಉಳಿದ ದಿನ ಅವರು ತಮ್ಮ ಇತರೇ ಮಕ್ಕಳ ಮನೆಗೆ ಹೋಗ್ತಾ ಇದ್ರು. ಹಾಗಾಗಿ ಮನೆನಲ್ಲಿ ನಾನು, ನನ್ನ ಗಂಡ, ಮಗು ಮಾತ್ರ ಇರ್ತಿದ್ವಿ. ಬಟ್ಟೆ ತೊಳಿಯಾಕೆ, ಪಾತ್ರೆ ತೊಳಿಯಾಕೆ, ಕಸಗೂಡಿಸೋಕೆ ಕೆಲಸದವರನ್ನಾ ಇಟ್ಟಕೊಂಡಿದ್ವಿಯಾದ್ರು. ಅಡುಗೆ ಮಾತ್ರ ನಾನೇ ಮಾಡಬೇಕಾಗಿತ್ತು. ನನಗೆ ತುಂಬಾ ಸುಸ್ತ ಅನ್ನಿಸ್ತಿತ್ತು. ಸ್ಕೂಲಿನಿಂದ ಬಂದ ಮೇಲೆ ಮಗುನ ನೋಡಕೊಳ್ಳೋಕೆ, ಅಡುಗೆ ಮಾಡೋಕೆ, ನನ್ನ ಗಂಡ ಮಗುನಾದ್ರು ನೋಡಕೊತಾ ಇರ್ಲಿಲ್ಲ. ಆಫೀಸ್‌ನಿಂದ ಬಂದ ತಕ್ಷಣ ಟಿ.ವಿ. ಮುಂದೆ ಕೂತ ಬಿಡ್ತಾ ಇದ್ರು. ಮಗು ಏನಾದ್ರು ಅತ್ತರೆ ನೀನು ಎಂಥಾ ತಾಯಿ ಮಗು ಅಳ್ತಾ ಇದ್ರು. ಸುಮ್ನೆ ಇದ್ದಿಯಲ್ಲ ಅಂತಾ ಬೈತಾ ಇದ್ರು. ನಂಗೆ ಕೋಪ ಬಂದು ನೀವು ಅದರ ತಂದೆಯಲ್ವಾ? ನೀವ್ ನೋಡೊಳ್ಳಿ ಅಂದ್ರೆ ಮಗುನ್ನಾ ತಾಯಿ ನೋಡಕೊ ಬೇಕು ತಂದೆಯಲ್ಲ ಅಂದು ಹೊರಗೆ ಹೋಗ್ತಾ ಇದ್ರು. ಅಡುಗೆನಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದ್ರೆ ಅದೇನ ಅಡುಗೆ ಮಾಡ್ತಿಯೇನೋ, ನಿಮ್ಮ ತಾಯಿ ನಿಂಗೆ ಹೇಳಿಕೊಟ್ಟಿಲ್ವೇನು ಅಡುಗೆ ಮಾಡೋದು ಹೀಗೆನಾ ಅಂತ ಅಂತಿಂದ್ರು. ಈ ಕಡೆ ಸ್ಕೂಲಿಗೆ ಹೋಗಿ ಬರೋದು, ಮತ್ತೆ ಬಂದು

ಮನೇಲಿ ಅಡುಗೆ ಮಾಡೋದು ಮಗುನ್ ಸುಧಾರಿಸೋದ್ರಲ್ಲಿ ನಂಗೆ ತುಂಬಾ ಆಯಾಸ ಅನ್ನಿಸಿ ಮಲ್ಕೊಂಡ್ರೆ, ನನ್ನ ಜೊತೆ ಬಲವಂತವಾಗಿ ಕೆಟ್ಟ ರೀತಿಯಲ್ಲಿ ನಡಕೋತಾ ಇದ್ರು. ನನಗೆ ಸುಸ್ತಾಗಿದೆ ಅಂತ ಎಷ್ಟು ಹೇಳಿದ್ರು ಅವರ ಕೇಳ್ತಾ ಇರ್ಲಿಲ್ಲ. ಅದರ ಬದಲಿಗೆ ನನ್ನೆ ಎಂಥಾ ಹೆಂಗಸ ನೀನು ಅಂತ ಬೈತಾ ಇದ್ರು. ದಿನ ದಿನಕ್ಕೂ ಅವರ ಕಾಟ ಜಾಸ್ತಿಯಾಗ್ತ ಹೋಯ್ತು. ಇವತ್ತು ಸರಿಹೋಗ್ತಾರೆ, ನಾಳೆ ಸರಿಹೋಗ್ತಾರೆ ಅಂತ ಅದೇಗೋ ಅವರ ಜೊತೆ ೬ ವರ್ಷ ಸಂಸಾರ ಮಾಡ್ದೆ. ಆದರೆ ಅವರಲ್ಲಿ ಸ್ವಲ್ಪಾನು ಬದಲಾವಣೇನೆ ಕಂಡು ಬರಲಿಲ್ಲ. ಇಂಥವರ ಜೊತೆ ಬದುಕೊದಕ್ಕಿಂತ ದೂರ ಆಗೋದೆ ವಾಸಿ ಎನಿಸಿ, ಅವರಿಂದ 'ಡೈವೋರ್ಸ್' ತಗೊಂಡೆ. ಈಗ ನಾನು ನನ್ನ ಮಗು ಪ್ರತ್ಯೇಕವಾಗಿ ವಾಸ ಮಾಡ್ತ ಇದ್ದೀವಿ. ನನ್ನ ಮಗ ಚಿಕ್ಕದಿರೊದ್ರಿಂದ ಅಲ್ಲದೆ ನಾನು ಮನೆನಲ್ಲಿ ಇರೋದಿಲ್ಲವಲ್ಲ ಅದಕ್ಕೆ ನನ್ನ ಅಮ್ಮ ನನ್ನ ಜೊತೆನಲ್ಲಿ ಇದ್ದಾರೆ. ಈಗಂತು ನಾನು ಯಾವುದೇ ರೀತಿನಲ್ಲಿ ಕಿರಿಕಿರಿ ಇಲ್ಲದೆ ಹಾಯಾಗಿ ಬದುಕ್ತಾ ಇದ್ದೀನಿ. ನಾನು, ನನ ಮಗು ಇದೇ ನನ್ನ ಸಂಸಾರ ಇಷ್ಟರಲ್ಲಿನೆ ನನಗೆ ತೃಪ್ತಿ ಸಿಗ್ತಿದೆ, ನೆಮ್ಮದಿಯಾಗಿ ಬದುಕ್ತಾ ಇದ್ದೀನಿ. ಹಾಗೆ ನಂಗೆ ಮೊದಲಿಂದ್ಲು ಕಾಲೇಜಿನಲ್ಲಿ ಪ್ರಾಧ್ಯಾಪಕಿ ಆಗಬೇಕಂಥ ತುಂಬಾ ಆಸೆ ಇತ್ತು. ಆದರೆ ನಂಗೆ ಮದುವೆಯಾಗಿ ನಂತರದಲ್ಲಿ ಅದನ್ನ ನೆರವೇರಿಸಿಕೊಳ್ಳೋಕೆ ಆಗಲಿಲ್ಲ. ನನ್ನ ಗಂಡಂಗೆ ಇದರ ಬಗ್ಗೆ ಕೇಳಿದ್ರೆ, ನೀನು ಲೆಕ್ಚರರ್ ಆಗಿ ಉದ್ಧಾರ ಮಾಡೋದು ಅಷ್ಟರಲ್ಲೆ ಇದೆ. ನೀನ್ ಲೆಕ್ಚರರ್ ಆದ್ರೆ ನಿನಕಿನ್ನ ಕಡಿಮೆ ದರ್ಜೆ ಕೆಲ್ಸ ನಂದಾಗುತ್ತೆ. ಅವಾಗ ನಾನು ನಿನ್ನ ಗುಲಾಮನಾಗಲೇನು? ಅದೆಲ್ಲ ಏನು ಬೇಡ ಅಂತಾ ನನ್ನ ಆಸೆಗೆ ಕಲ್ಲ ಹಾಕಿದ್ರು. ಆದರೆ ಅವರಿಂದ ಬಿಡುಗಡೆ ಹೊಂದಿದ ಮೇಲೆ ನನ್ನ ಆಸೆನ ಪೂರೈಸಿಕೊಳ್ಳೋ ಪ್ರಯತ್ನಾ ಮಾಡ್ತಾ ಇದ್ದೀನಿ". ಇನ್ನೊಂದು ಮದುವೆ ಮಾಡಿಕೊಳ್ತಿರಾ? "ಇಷ್ಟಪಟ್ಟು ಮದುವೆಯಾಗಿರೋ ಗಂಡಂದೆ ಇಷ್ಟು ಹಣೆಬರಹ ಇದೆ. ಇನ್ನೂ ಇನ್ನೊಂದು ಮದುವೆನಾ?" ಅಂತಾ ಮಾತು ಮುಗಿಸಿದ್ರು.

**ಪ್ರಕರಣ-೭**

೨೭ ವರ್ಷದ ಅಂಬುಜ ಅನಕ್ಷರಸ್ಥೆ. ಇವರು ವಿವಾಹ ಬಂಧನದಿಂದ ಹೊರಬಂದು ಜೀವಿಸುತ್ತಿರುವ ಮಹಿಳೆ. ಇವರು ಕಾನೂನಿನ ಮೊರೆಹೋಗದೆ ಪಂಚಾಯ್ತಿ ಮೂಲಕ ವಿವಾಹ ಬಂಧನದಿಂದ ಹೊರ ಬಂದಿರುವರು. ಇವರ ವಿವಾಹವು ಇವರ ತಾಯಿಯ ತಮ್ಮನ ಜೊತೆ ಅಂದರೆ ಸೋದರಮಾನವನ ಜೊತೆ ನೆರವೇರಿತ್ತು. ಇವರ ವಿವಾಹ ನೆರವೇರಿದ್ದು ಇವರ ೧೦ನೇ ವರ್ಷದಲ್ಲಿ. ಹಾಗಾಗಿ ಇವರು ಋತುಮತಿಯಾಗುವವರೆಗೂ ಗಂಡನ ಮನೆಗೆ ಹೋಗಿರಲಿಲ್ಲವಂತೆ. ೧೨ನೆಯ ವರ್ಷದಲ್ಲಿ ಋತುಮತಿಯಾದ ಇವರನ್ನು ಗಂಡನ ಮನೆಗೆ ಕಳುಹಿಸಿದ್ದಾರೆ. ಇವರ ವಿವಾಹವಾಗಿ ಇಂದಿಗೆ ೧೭ ವರ್ಷ ಆಗಿದ್ದು, ವಿವಾಹ ಬಂಧನದಿಂದ ಹೊರಬಂದು ೯ ವರ್ಷ ಕಳೆದಿದೆ. ಯಾವ ಕಾರಣಕ್ಕೆ ನೀವು ನಿಮ್ಮ ಗಂಡನಿಂದ ಬಿಡುಗಡೆ ಪಡೆದಿರಿ? ಎಂದು ಕೇಳಿದ್ದಕ್ಕೆ "ನನ್ನ ಗಂಡ ನನಗೆ ಹೊಡೆಯೋದು, ಬಡಿಯೋದು ಮಾಡಿಲ್ಲ. ಆದರೆ ನನ್ನ ಸರಿಯಾಗಿ ಮಾತಾಡ್ಸಾತ್ತಾ ಇರ್ಲಿಲ್ಲ. ಬೆಳಿಗ್ಗೆಯಲ್ಲಿ ನನ್ನ ಮಾತಾಡಿಸಿಲ್ಲದಾತ ರಾತ್ರಿ ಮಾತ್ರ ನನ್ನ

ಹತ್ರ ಬರ್ತಿದ್ವ. ಒಂದೊಂದು ಸಾರಿ ನಂಗೆ ಸಿಟ್ಟು ಬಂದು, ಬೆಳಿಗ್ಗೆಯಲ್ಲಿ ನನ್ನ ಜೊತೆ ಮಾತಾಡಂಗಿಲ್ಲ. ರಾತ್ರಿ ಮಾತ್ರ ನಾನು ಬೇಕೇನೂ ಅಂತಿದ್ವೆ. ಆದ್ರು ನನ್ನ ಏನು ಅಂತ ಮಾತಾಡಿಸ್ತಿರಲಿಲ್ಲ. ನಾನು ಮಾಡಿದ ಅಡುಗೆ ತಿಂತಿದ್ವ. ಕೆಲಸಕ್ಕೆ ಹೋಗ್ತಾ ಇದ್ವ. ಸಾಯಂಕಾಲ ಆದ್ರೆ ಮತ್ತೆ ಮನೆಗೆ ಬರ್ತಾ ಇದ್ವ. ಮನೇಲಿ ಸ್ವಲ್ಪ ಹೊತ್ತು ಇದ್ದು ಬೇರೆ ಕಡೆ ಹೋಗ್ತಿದ್ವ. ಒಂದು ದಿನ ನಂಗೆ ತುಂಬಾ ಬ್ಯಾಸರ ಆಗಿ ನೀನು ಯಾಕೆ ಹೀಗೆ ಮಾಡ್ತಿ. ನಂದೇನಾರ ತಪ್ಪೈತ ಅಂತ ಕೇಳ್ದೆ. ಅದಕ್ಕಾತ ನಿನ್ನ ಮದುವಿ ಮಾಡಿಕೊಳ್ಳೋಕೆ ನಂಗೆ ಇಷ್ಟ ಇರಲಿಲ್ಲ. ಬಲವಂತವಾಗಿ ಅಕ್ಕನ ಮಗಳು ಅಂತ ನಿನ್ನ ಜೊತಿ ಮದುವಿ ಮಾಡಿಸ್ಯಾರ ನಾನೇನ್ ಮಾಡ್ಲಿ ಅಂತಂದು ಹೋದ.

ನಾನು ಸಿಟ್ಟಿನಲ್ಲಿ ಚಿಮ್ನೆಣ್ಣಿ (ಸೀಮೆ ಎಣ್ಣೆ) ಮೈಮೇಲೆ ಸುರುಕೊಂಡು ಬೆಂಕಿ ಹಚ್ಚಿಕೊಂಡೆ ಇದನ್ನೋಡಿದ ಪಕ್ಕದ ಮನೆಯವರು ನನ್ನ ಆಸ್ಪತ್ರೆಗೆ ಸೇರಿಸಿದ್ರು. ನನ್ನ ಅಪ್ಪ ಅಮ್ಮನು ಆಸ್ಪತ್ರೆಗೆ ಬಂದ್ರು. ನನ್ನ ಗಂಡ ಒಂದು ಸರಿ ಮಾತ್ರ ಬಂದದ್ದು, ಬಂದು ನೀನು ಹೇಗಿದ್ದೀಯಾ ಏನು ಎತ್ತ ಅಂತ ಕೇಳ್ಲೆ ಇಲ್ಲ. ನನ್ನ ಆಸ್ಪತ್ರೆಯ ಎಲ್ಲಾ ಖರ್ಚನ್ನು ನನ್ನ ಅಪ್ಪನೇ ನೋಡಿಕೊಂಡ ನಾನು ಆಸ್ಪತ್ರೆಯಿಂದ ಸೀದ ನನ್ನ ಅಪ್ಪನ ಮನೆಗೆ ಬಂದೆ. ನಾನು ಮನೆಗೆ ಬಂದ ಮೇಲು ಒಂದು ಸಾರಿಯೂ ನನ್ನ ನೊಡ್ಕೊಂಡೋಗೋಕೆ ಬರ್ಲಿಲ್ಲ. ಅವನ ಜೊತೆ ಸಂಸಾರ ಮಾಡಿದ್ವಕಾ ಒಂದು ಮಗುನು ಆಗಿತ್ತು. ಆ ಮಗನ್ನು ಮಾತಾಡ್ಸಾಕು ಬರ್ಲಿಲ್ಲ. ನಾನು ಗುಣಮುಖವಾಗ್ತಾ ಇದ್ದೆ. ಇಂಥ ಸ್ಥಿತೀಲಿ ನಾನು ಸಂಸ್ಕಾರಕ್ಕೆ (ಲೈಂಗಿಕ ಜೀವನ) ಲಾಯಕ್ಕಲ್ಲ ಅಂತಂದು ಯಾರಿಗೂ ಗೊತ್ತಾಗದ ಹಾಗೆ ಇನ್ನೊಂದು ಮದುವೆ ಮಾಡಿಕೊಂಡು ಬಂದಾ, ಆತ ಇನ್ನೊಂದು ಮದುವೆ ಮಾಡಕೊಂಡ ಬಂದದನ್ನ ನೋಡಿ ಎಲ್ಲರು ನಂಗೆ ಬೈದರು. ನೀನು ಸುಟ್ಟಗಂಡಿ ಮತ್ತೀನೇನು ಮಾಡ್ತಾನ ನಿನ್ನಂತಾಕಿ ಜೊತೆ ಯಾಂಗ ಸಂಸಾರ ಮಾಡ್ತಾನ. ಅದಕ್ಕೆ ಇನ್ನೊಂದು ಮದುವಿ ಮಾಡಿಕೊಂಡು ಬಂದಾನ ಆತನದ್ದೇನು ತಪ್ಪಿಲ್ಲ. ನೀನ ನಿನ್ನ ಕೈಯಾರ ನಿನ್ನ ಜೀವನದ ಮ್ಯಾಲ ಕಲ್ ಹಾಕ್ಕೊಂಡಿ ಅಂತಿದ್ರು. ನಂಗೆ ಆವಾಗ ಏನ್ ಮಾಡಬೇಕು ಅಂತ ಗೊತ್ತಾಗಲೇ ಇಲ್ಲ. ನನ್ನ ವಿಷಯ ಗೊತ್ತಾಗಿ ಯಾರೋ ಒಬ್ಬ ಬುದ್ಧಿವಂತರು (ಅಕ್ಷರಸ್ಥರು) ನೀನು ಕೋರ್ಟಗೆ ಹೋಗು ನ್ಯಾಯ ಸಿಗುತ್ತೆ ಅಂದ್ರು. ಅದಕ್ಕೆ ನನ್ನ ತಂದೆಗೆ ಹೇಳಿ ಕೋರ್ಟಿನಾಗ ಅರ್ಜಿ ಸಲ್ಲಿಸಾಕ ಹೋಗ್ತಿದ್ವಿ. ಈ ವಿಷಯ ತಿಳಿದ ನನ್ನ ಗಂಡ ನಾನು ಕೋರ್ಟಗೆ ಹೋಗಲಿಲ್ಲದಂಗ ಮಾಡಿ ಊರಿನಾಗಿರೋ ದೊಡ್ಡ ಮನುಷ್ಯರನ್ನು ಸೇರ್ಸಿ ಪಂಚಾಯ್ತಿ ಮಾಡಿಸಿದ. ಇದರಲ್ಲಿ ಅವರೆಲ್ಲ ಸೇರಿಬಿಟ್ಟು ಅವನು ಬೇರೆ ಯಾರು ಅಲ್ಲ. ನಿನ್ನ ಸೋದರ ಮಾವ ಏನೋ ನಡೆದದ್ದು ನಡೆದು ಹೋಗ್ಬಿಟ್ಯಾತಿ ನಿನ್ನ ಪಾಡಿಗೆ ನೀನು ಇದ್ದು ಬಿಡು. ಅವನ ಪಾಡಿಗೆ ಅವನು ಇರ್ತಾನೆ. ನಿನಿಗ ನಿನ್ನ ಮಗನಿಗೆ ನೋಡ್ಕೊಳ್ಳೊಕೆ ಇಂತಿಷ್ಟು ದುಡ್ಡು ಅವನಿಂದ ಕೊಡಿಸ್ತೀವಿ ಅಂತಂದು. ಅವನು ೪೦ ಸಾವಿರ ಕೊಡಬೇಕೆಂದು ತೀರ್ಮಾನಿಸಿದರು. ಆ ೪೦ ಸಾವಿರದಲ್ಲಿ ಇನ್ನೂ ೩೦ ಸಾವಿರ ಕೊಡಬೇಕು ಬರಿ ೧೦ ಸಾವಿರ ಮಾತ್ರ ಕೊಟ್ಟಾನೆ. ನಾಲ್ಕೈದು ವರ್ಷ ಆಗಕ ಬಂತು ಇನ್ನೂ ಉಳಿದಿದ್ದು ಕೊಟ್ಟಿಲ್ಲ. ಈತ ಹಿಂಗ ಮಾಡ್ಯಾನಂತ ನಾನು ಯಾರತ್ರ ಹೋಗಿ ಹೇಳಬೇಕು. ನಾನು ಹೋಗಿ ಒಂದೆರಡು ಸಲ ಹೇಳ್ದೆ ಅವರ್ಯಾರು (ಪಂಚಾಯ್ತಿ ಮಾಡಿದವರತ್ರ) ಕಿವಿಗೆ ಹಾಕ್ಕೊಳಿಲ್ಲ. ನಾನು

ಅಷ್ಟಕ್ಕೆ ಸುಮ್ನೆಯಾದೆ". ನಿಮ್ಮ ಗಂಡನ ಬಿಟ್ಟು ಬಂದಮೇಲೆ ನಿಮ್ಮ ಜೀವನದ ಬಗ್ಗೆ ನಿಮಗೆ ಏನು ಅನ್ನಿಸ್ತಾ? ಇದೆ ಅಂತ ಕೇಳಿದ್ದಕ್ಕೆ "ಒಂದು ಕಡಿ ನನ್ನ ಗಂಡನಿಂದ ಬೇರೆ ಬಂದು ಜೀವನ ಮಾಡ್ತಿರೋದು ಚಲೋ ಅನ್ನಿಸ್ತದೆ. ನನ್ನ ಗಂಡನ ಜೊತೆ ಇದ್ದಾಗ ಒತ್ತೊತ್ತಿಗೆ ಉಣ್‌ಬೇಕು, ಮಲಕೋಬೇಕು ಇಷ್ಟೇ ಆಗಿತ್ತು. ಈಗ ಅಂಗಿಲ್ಲ, ನಾನು ಕೆಲಸಕ್ಕೆ ಹೋಗ್ತಿರೊದ್ರಿಂದ ಹೊರಗಿನ ಜನಜೊತೆ ನಾನು ಬೆರಿಯಕತೀನಿ, ನನಗ ಸಮಾಧಾನ ಆಗೋವಷ್ಟು ಮಾತಾಡ್ತೀನಿ. ನಾನೀಗ ಅಪ್ಪ ಅಮ್ಮನ ಮನೆಯಲ್ಲಿನೇ ಇರೋದು. ಮನೆ ಕೆಲಸಾನು ಮಾಡ್ತೀನಿ, ಹೊರಗಿನ ಕೆಲಸಾನು ಮಾಡ್ತೀನಿ. ಆದ್ರು ನಂಗೆ ಸಾಕಾಯ್ತು ಅಂತ ಅನ್ನಿಸೋದೆ ಇಲ್ಲ. ನನ್ನ ಗಂಡನ ಜೊತೆ ಇದ್ದಾಗ ಮನೆಕೆಲಸ ಮಾತ್ರ ಮಾಡ್ತಾ ಇದ್ದೆ. ಆದ್ರು ಮಾಡೊದಕ್ಕೆ ಮನಸ ಇರ್ತಿರಲಿಲ್ಲ. ಈಗ ಹಂಗ ಅನಿಸೂದೇ ಇಲ್ಲ". "ನಿಮ್ಮ ತಂದೆ ತಾಯಿ ಮನೆಯಲ್ಲಿ ಮತ್ತೆ ಅಕ್ಕ ಪಕ್ಕದವರು ನಿಮಗೆ ಗಂಡ ಬಿಟ್ಕೋಳು ಅಂತ ಏನಾದ್ರು ಅಂದಿದಾರ?" ಅಪ್ಪ ಅಮ್ಮ ಏನೂ ಅಂದಿಲ್ಲ. ನಮ್ಮ ತಮ್ಮಂದಿರು ಒಂದೊಂದು ಸಲ ನೀನೊಬ್ಬಾಕಿ ಗಂಟ ಬಿದ್ದಿ ನೋಡು ಅಂತಾರೆ. ಅಕ್ಕಪಕ್ಕದವರು ಒಂದೊಂದು ಸಲ ಚೆನ್ನಾಗಿ ಮಾತಾಡ್ಸತ್ತಾರೆ. ಮತ್ತೊಂದು ಸಲ ಬೈತಾರೆ ನಾನೇನಾದ್ರು ಸ್ವಲ್ಪ ಜೋರು ಮಾತಾಡಿದ್ರೆ ಇನ್ನ ಗಂಡ ಜೊತೆಗಿದ್ದಿದ್ರೆ ಇನ್ನ ಜೋರು ಮಾತಾಡ್ತಿದ್ದಿ ಅಂತ ಬೈತಾರೆ". ಮುಂದೆ ಯಾವ ರೀತಿ ಜೀವನ ನಡೆಸಬೇಕು ಅಂತಾ ಅನ್ನಕೊಂಡಿದಿರಾ? ಎಂದು ಕೇಳಿದರೆ, ನಾನು ಹೀಗೆ ಬದುಕಬೇಕು ಹಾಗೆ ಬದುಕಬೇಕು ಅಂತಾ ಏನು ಅನ್‌ಕೊಂಡಿಲ್ಲ. ಪರಿಸ್ಥಿತಿ ಹೇಗೆ ಬರುತ್ತೋ ಹಾಗೆ ಜೀವನ ನಡೆಸ್ತೀನಿ. ನಂದು ಒಂದೇ ಒಂದು ಆಸೆ ಅಂದ್ರೆ ನನ್ನ ಮಗನ್ನ ಚೆನ್ನಾಗಿ ಓದಿಸಬೇಕು. ನಂಗೆ ಯಾರ್‍ಯಾರು ಕೀಳಾಗಿ ಕಂಡಾರ ಅವರೆದುರಿಗೆ ನಾನು ಚೆನ್ನಾಗಿ ಬದುಕಿ ನನ್ನ ಮಗನಿಗೆ ಒಂದು ದೊಡ್ಡ ಕೆಲಸ ಬರಂಗೆ ಮಾಡಬೇಕು" ಎಂದು ಹೇಳುತ್ತಾರೆ. ಕೊನೆಯಲ್ಲಿ ಇವರಿಗೆ ಕೋರ್ಟಿನ ಮೂಲಕ ತಮ್ಮ ಗಂಡನಿಂದ ಜೀವನಾಂಶ ಪಡೆಯುವುದರ ಬಗ್ಗೆ ಸಲಹೆ ನೀಡಿ ಅಲ್ಲಿಂದ ವಾಪಸ್ಸು ಬಂದೆ.

**ಪ್ರಕರಣ-೮**

೩೦ ವರ್ಷದ ಲಕ್ಷ್ಮಿ "ಪಂಚಾಯ್ತಿ" ಮೂಲಕ ವಿವಾಹ ಬಂಧನದಿಂದ ಹೊರಬಂದು ಜೀವನ ನಡೆಸ್ತಾ ಇರುವಂಥಾ ಮಹಿಳೆಯಾಗಿದ್ದಾಳೆ. ಇವಳು ಪಿಯುಸಿ ಪ್ರಥಮ ವರ್ಷದವರೆಗೂ ಓದಿರುವಳು. ಇವಳ ವಿವಾಹ ರವಿ ಎನ್ನುವವರೊಂದಿಗೆ ನೆರವೇರಿತ್ತು. ಇವರ ವಿವಾಹ ನೆರವೇರಿ ೬ ವರ್ಷ ಕಳೆದಿದ್ದು. ಇವರು ವಿವಾಹ ಬಂಧನದಿಂದ ಹೊರಬಂದು ೫ ವರ್ಷ ಕಳೆದಿದೆ. ಯಾವ ಕಾರಣಕ್ಕೆ ನೀವು ನಿಮ್ಮ ಗಂಡನಿಂದ ಹೊರ ಬಂದಿರುವಿರಿ ಎಂದು ಕೇಳಿದಾಗ "ನನ್ನ ಮದುವೆ ಎದುರು-ಬದುರು ಸಂಬಂಧದ್ದು. ಅಂದರೆ ನನ್ನ ಅಣ್ಣಂಗೆ ನನ್ನ ಗಂಡನ ತಂಗಿನ, ನನ್ನಾ ನನ್ನ ಅಣ್ಣನ ಹೆಂಡ್ತಿ ಅಣ್ಣಂಗೆ ಮದುವೆ ಮಾಡಿಕೊಡಲಾಗಿತ್ತು. ನಾನು ನೋಡೋಕೆ ಅಷ್ಟು ಸುಂದರವಾಗಿಲ್ಲ. ಇದು ಗೊತ್ತಿದ್ದು ತಮ್ಮ ತಂಗಿ ಮದುವೆ ನನ್ನ ಅಣ್ಣನ ಜೊತೆ ನೆರವೇರಬೇಕು ಅನ್ನೋ ಕಾರಣಕ್ಕೆ ನನ್ನ ಮದುವೆಯಾಗಿದ್ರಂತೆ. ಅದಕ್ಕೆ ನನ್ನ ಯಾವಾಗ್ಲೂ ಬೈತಾನೆ ಇದ್ರು. ಒಂದೊಂದು ಸಾರಿ ಹೊಡಿತಾನು ಇದ್ರು. ನಾನು ಮಾಡಿದ ಪ್ರತಿ ಕೆಲಸದಲ್ಲೂ ತಪ್ಪು ಕಂಡು ಹಿಡಿತಾ ಇದ್ರು. ನಾನು ಅಡಿಗೇನಾ ರುಚಿಯಾಗಿ ಮಾಡಿದ್ರು ಸಾರಿಗೆ ಉಪ್ಪು

ಜಾಸ್ತಿಯಾಕೀದಿಯಾ ಅಂತಿದ್ರು. ಇಲ್ಲಂದ್ರೆ ಖಾರ ಜಾಸ್ತಿ ಹಾಕಿದೀಯಾ ಅಂತಿದ್ರು. ನಮ್ಮತ್ತೆ ಇವನ್ನೆಲ್ಲ ನೋಡ್ತಾ ಇದ್ರು. ಅವರು ಏನು ಮಾಡಲಾರದಂತ ಸ್ಥಿತಿಯಲ್ಲಿ ಅಸಾಯಕರಾಗಿದ್ರು. ಜನರು ನನ್ನ ಬಗ್ಗೆ ಕೆಟ್ಟ ಭಾವನೆ ಹೊಂದಬೇಕು ಅಂತಂದು ನನ್ನ ಹೆಂಡ್ತಿಗೂ, ಅಮ್ಮಂಗೂ ಸರಿ ಹೋಗವಲ್ಲದು ಅದಕ್ಕೆ ಬೇರೆ ಮನೆ ಮಾಡಿ ನನ್ನ ಹೆಂಡ್ತಿನ ಇಡ್ತೀನಿ ಅಂತಂದು, ಬೇರೆ ಮನೆ ಮಾಡಿ ಇಟ್ರು ರಾತ್ರಿ ನಾನೊಬ್ಬಳೇ ಆ ಮನೆಯಲ್ಲಿ ಇರಬೇಕಾಗಿತ್ತು. ಒಂದಿನಾನು ನಾನಿದ್ದ ಮನೆಯಲ್ಲಿ ಬಂದು ಮಲಗಲಿಲ್ಲ. ಅದಕ್ಕೆ ನಂಗೆ ಭಯ ಆಗಿ ನಮ್ಮ ಅಮ್ಮನ್ನ ಕರಸಿಕೊಂಡೆ. ಅವರನ್ನ ಕರಸಕೊಂಡ ಮೇಲೆ ನೀನು ಹೆಂಗೆ ಅವರನ್ನ ಕರಸ್ಕೊಂಡಿ ನನಗೆ ಹೇಳ್ದೆ ಕೇಳ್ದೆ ನೀನೆ ನಿರ್ಣಯ ತಗೋತಿ ಏನು ಅಂದು ಹೊಡೆದರು. ನನ್ನ ತಾಯಿ ಊರಿಗೆ ಹೋದ ಮೇಲೆ ನೀನು ಇನ್ನು ಮುಂದೆ ನಿನ್ನ ತವರ ಮನೆಗೆ ಹೊಗ್ಬಾರ್ದು. ನಿನ್ನ ತವರು ಮನೆಯಲ್ಲಿರೊ ಯಾರನ್ನು ಮಾತಾಡಿಸಬಾರ್ದು. ನಾನು ಏನು ಮಾಡು ಅಂತೀನಿ ಅದನ್ನ ಮಾಡಬೇಕು. ನಾನು ಎಲ್ಲಿಗೆ ಹೋಗು ಅಂತೀನಿ ಅಲ್ಲಿಗೆ ಹೋಗ್ಬೇಕು. ನಾನು ಯಾರನ್ನು ಮಾತಾಡಿಸಬೇಕು ಅಂತ ಹೇಳ್ತಿನೋ ಅವರನ್ನ ಮಾತಾಡಿಸಬೇಕು ಎಂದು ಒತ್ತಾಯ ಮಾಡೋಕೆ ಪ್ರಾರಂಭಿಸಿದರು. ನನಗೂ ಇವರ ಜೊತೆಗಿನ ಜೀವನ ಬೇಸರ ಎನಿಸಿ ಇವರಿಂದ ದೂರ ಹೋಗೋದರ ಬಗ್ಗೆ ನನ್ನ ತವರಿನವರಿಗೆ ತಿಳಿಸಿದೆ. ನಾನು ಕೋರ್ಟಿನ ಮೂಲಕನೇ ಇವರಿಂದ ಬೇರೆ ಆಗಬೇಕು ಅಂಥ ಅನ್ನಕೊಂಡಿದ್ದೆ. ಆದರೆ ಹಿರಿಯರೆಲ್ಲ ಮನೆ ಮರ್ಯಾದೆ ವಿಷಯ ಕೋರ್ಟಿನವರೆಗೆ ಯಾಕೆ? ನಾವೇ ಪಂಚಾಯ್ತಿ ಮಾಡ್ತೀವಿ ಅಂತಂದು ನನಗೆ ಅವರಿಂದ ಬಿಡುಗಡೆ ಕೊಡ್ಸಿದರು. ಹಾಗೆ ನನ್ನ ಜೀವನ ನಿರ್ವಹಣೆಗೆಂದು ಇಂತಿಷ್ಟು ಹಣನ ಕೊಡಬೇಕು ಎಂದು ತೀರ್ಮಾನಿಸಿದ್ದಾರೆ. "ನಿಮ್ಮ ಗಂಡನಿಂದ ಬೇರೆಯಾದ ಮೇಲೆ ನಿಮ್ಮ ಜೀವನದ ಬಗ್ಗೆ ಏನ್ ಅನ್ನಿಸ್ತಾ ಇದೆ?" ನನ್ನ ಇಷ್ಟಪಡದೇ ಇರೋ ಗಂಡನ ಜೊತೆ ಬಲವಂತವಾಗಿ ಬದುಕೋದಕ್ಕಿಂತ ಈಗಿನ ಜೀವನಾನೇ ಚೆನ್ನಾಗಿ ಅನ್ನಿಸ್ತಾ ಇದೆ. ನೀವು ಈಗ ಎಲ್ಲಿದಿರಾ ಅಂತ ಕೇಳಿದಕ್ಕೆ, "ನಾನೀಗ ಸದ್ಯ ನನ್ನ ತಂದೆ ತಾಯಿ ಮನೆಯಲ್ಲಿ ಇದೀನಿ. ನಾನು ಹೆಚ್ಚು ದಿನ ಅಲ್ಲಿರೋದಕ್ಕೆ ಇಷ್ಟ ಪಡೋದಿಲ್ಲ. ಯಾಕೆಂದರೆ ನನ್ನ ಅಣ್ಣ ನನ್ನ ತಾತ್ಸಾರದಿಂದ ನೋಡ್ತಾ ಇದ್ದಾನೆ. ನನಗೆ ಹೇಗೊ ತಿಂಗಳಿಗೆ ಇಂತಿಷ್ಟು ಹಣ ಬರ್‍ತಿದೆ. ಜೊತೆಗೆ ನಾನು ಸ್ಕೂಲಿನಲ್ಲಿ ಕೆಲಸಕ್ಕೆ ಹೋಗ್ತೀದ್ದೀನಿ. ಆದಷ್ಟು ಬೇಗ ಬೇರೆ ಹೋಗ್ತೀನಿ. ಅಣ್ಣನ ಮನೆಯಲ್ಲಿ ತುಂಬಾ ಕಷ್ಟನೋವುಗಳನ್ನು ಅನುಭವಿಸಿದ್ದೀನಿ" ಎಂದು ಹೇಳುತ್ತಾಳೆ. ಇನ್ನೊಂದು ಮದುವೆ ಬಗ್ಗೆ ಯೋಚನೆ ಮಾಡಿದಿರ ಅಂತ ಕೇಳಿದ್ದಕ್ಕೆ, "ನನ್ನ ಮನಸ್ಸಿಗೆ ಇಷ್ಟ ಆಗುವ ಕುಟುಂಬ ಒಳಗೊಂಡು ಎಲ್ಲ ವಿಷಯಗಳು ಅಂದರೆ ಕೆಲಸ, ಅಡುಗೆ ಇನ್ನಿತರ ಕೆಲಸಗಳು ಹೊಂದಾಣಿಕೆ ಆಗುವ ಹುಡುಗ ಸಿಕ್ಕರೆ ಮತ್ತೊಂದು ಮದುವೆಯಾಗ್ತೀನಿ". ಮುಂದೆ ಯಾವುದಾದ್ರು ತೊಂದರೆಯಾದ್ರ ಕೋರ್ಟಿಗೆ ಹೊಗ್ತೀರಾ? ಎಂಬ ಪ್ರಶ್ನೆಗೆ "ಹೌದು ಮುಂದೆ ಯಾವುದೇ ಬಗೆಯಲ್ಲಿ ನನ್ನ ಗಂಡನಿಂದ ತೊಂದರೆಯಾದ್ರೆ ಕೋರ್ಟಿಗೆ ಹೋಗ್ತೀನಿ" ಎಂದು ದೃಢವಾಗಿ ಹೇಳುತ್ತಾಳೆ.

ಮೇಲಿನ ಎಲ್ಲಾ ಪ್ರಕರಣಗಳಲ್ಲಿ ಎಲ್ಲರೂ ವೈವಾಹಿಕ ಬಂಧನದಲ್ಲಿ ಸಿಹಿ ಅನುಭವಕ್ಕಿಂತ ಕಹಿ ಅನುಭವಗಳನ್ನೇ ಅನುಭವಿಸಿದ್ದಾರೆ. ಇಂತಹ ಒಂದು ಸಂಕಷ್ಟದಿಂದ ಹೊರಬಂದು ತಮ್ಮ ಬದುಕನ್ನು

ಉತ್ತಮ ರೀತಿಯಲ್ಲಿ ಕಟ್ಟಿಕೊಳ್ಳಬೇಕೆನ್ನುವ ಈ ಮಹಿಳೆಯರ ಮನೋಬಲವು ಮೆಚ್ಚುವಂತದ್ದಾಗಿದೆ. ಅಲ್ಲದೆ ವಿವಾಹ ಬಂಧನದಿಂದ ಹೊರಬಂದು ಜೀವಿಸುವಂಥ ಸಂದರ್ಭದಲ್ಲಿ ಸಮಾಜ ವ್ಯವಸ್ಥೆಯ ಮೌಲ್ಯಗಳಿಂದ ತೊಂದರೆಗಳಿಗೆ ಒಳಗಾಗುತ್ತಿರುವಂಥ ಸ್ಥಿತಿಯಲ್ಲಿಯು ತಮ್ಮ ಜೀವನವನ್ನು ತಮ್ಮದೇ ಆದ ಬಗೆಯಲ್ಲಿ ಕಟ್ಟಿಕೊಂಡು ಬದುಕುತ್ತಿರುವ ಈ ಮಹಿಳೆಯರ ಆತ್ಮಬಲವು ಪ್ರಶಂಸನೀಯವಾಗಿದೆ.

• • •

## ಅಧ್ಯಾಯ ೭

## ವಿಚ್ಛೇದನೆ ನಂತರದ ಬದುಕು : ವಿಚ್ಛೇದಿತ ಮಹಿಳೆಯರನ್ನು ಅನುಲಕ್ಷಿಸಿ

ವಿಚ್ಛೇದನೆಯ ನಂತರದ ಬದುಕಿನಲ್ಲಿ ಇತ್ಯಾತ್ಮಕ ಹಾಗೂ ನೇತ್ಯಾತ್ಮಕ ಈ ಎರಡು ಅಂಶಗಳನ್ನು ಗುರುತಿಸಬಹುದು. ಇತ್ಯಾತ್ಮಕ ಅಂಶಗಳನ್ನು ಈ ಮಹಿಳೆಯರು ಕಂಡುಕೊಂಡಿರುವಂಥವುದ್ದಾಗಿದ್ದರೆ, ನೇತ್ಯಾತ್ಮಕ ಅಂಶಗಳು ಪುರುಷಪ್ರಧಾನ ವ್ಯವಸ್ಥೆ ಅವಳಿಗೆ ತಂದಿರುವಂಥದ್ದಾಗಿದೆ. ಈ ನೇತ್ಯಾತ್ಮಕ ಸಂಗತಿಗಳು ಈ ಮಹಿಳೆಯರಿಗೆ ಹಲವು ಸಮಸ್ಯೆಗಳನ್ನು ತಂದೊಡ್ಡುತ್ತವೆಯಾದರೂ, ಈ ಸಮಸ್ಯೆಗಳ ನಡುವೆಯೇ ನಾವು ಬದುಕಬಲ್ಲೆವು ಎಂದು ತೋರಿಸಿಕೊಡುತ್ತಿರುವ ಮಹಿಳೆಯರ ಆತ್ಮಬಲವು ಮೆಚ್ಚುವಂತದ್ದಾಗಿದೆ. ತಮಗಾಗುತ್ತಿರುವ ಸಂಕಷ್ಟಗಳ ನಡುವೆಯೇ ಹೊಸ ಬದುಕನ್ನು ಕಟ್ಟಿಕೊಳ್ಳುತ್ತಾರೆ.

ವಿಚ್ಛೇದನೆಯ ನಂತರದ ಬದುಕಿಗೆ ಸಂಬಂಧಿಸಿದಂತೆ ಇತ್ಯಾತ್ಮಕ ಪ್ರತಿಕ್ರಿಯೆಯನ್ನು ತಿಳಿಯುವ ಸಂದರ್ಭದಲ್ಲಿ ಐದು ಅಂಶಗಳಲ್ಲಿ ಅದನ್ನು ಸ್ಪಷ್ಟಪಡಿಸಲಾಗಿದೆ.

- ನೆಮ್ಮದಿಯ ಜೀವನ.
- ಸ್ವಾತಂತ್ರ್ಯದ ಜೀವನಕ್ಕೆ ಅವಕಾಶ.
- ಸ್ವಾವಲಂಬನೆಯ ಬದುಕು.
- ವ್ಯಕ್ತಿತ್ವದ ಬೆಳವಣಿಗೆ.
- ಆತ್ಮಬಲ ಮತ್ತು ಮನೋಸ್ಥೈರ್ಯ.

**• ನೆಮ್ಮದಿಯ ಜೀವನ**

ಗಂಡನಿಂದ ವಿಚ್ಛೇದನೆ ಪಡೆದು ಜೀವನ ನಡೆಸುತ್ತಿರುವ ಮಹಿಳೆಯರು ನೆಮ್ಮದಿಯ ಜೀವನವನ್ನು ನಡೆಸುತ್ತಿರುವುದನ್ನು ಕಾಣಬಹುದಾಗಿದೆ. ದೈಹಿಕವಾಗಿ ಮಾನಸಿಕವಾಗಿ ಗಂಡನ ಮನೆಯಲ್ಲಿ ಕುಗ್ಗುವಂತಹ ಸ್ಥಿತಿಯಿಂದ ಮುಕ್ತಿಕೊಡಿಸಿದ ಮಾರ್ಗವಾಗಿ ವಿಚ್ಛೇದನೆ ಪ್ರತಿಕ್ರಿಯೆಯು ಕಂಡು ಬರುತ್ತದೆ.

ವಿವಾಹ ಸಂಸ್ಥೆಯಲ್ಲಿ ಗಂಡನಿಂದ ಅನುಭವಿಸುವಂಥ ಯಾವುದೇ ಬಗೆಯ ಹಿಂಸೆ ಇಲ್ಲಿ ಕಂಡು ಬರುವುದಿಲ್ಲ. ಕೆಲವು ಮಹಿಳೆಯರು ತಿಳಿಸೋ ಪ್ರಕಾರ "ನನ್ನ ಗಂಡ ಬಂದ ಅಂದ್ರೆ ಸಾಕು. ನನಗೆ ಭಯ-

ಭಯ ಆಗ್ತಾ ಇತ್ತು. ಯಾವಾಗ ಬಂದು ಏನ್ ಮಾಡ್ತಾನೊ ಅನ್ನೋದೆ ಗೊತ್ತಾಗ್ತ ಇರಲಿಲ್ಲ. ನಕ್ಕೊಂತಾನೆ ಇರ್ತಿದ್ದ ಹಾಗೆ ಹೊಡಿತಾ ಇದ್ದ. ಇನ್ನು ರಾತ್ರಿ ಅವನ ಜೊತೆ ಮಲಕ್ಕೊಬೇಕಂದ್ರನೆ ಭಯ ಆಗ್ತಿತ್ತು. ಯಾಕೆಂದರೆ ರಾತ್ರಿ ಸುಮ್ನೆ ಮಲ್ಕೊಂಡೆ ಇರ್ತಿದ್ದ. ಆದ್ರೆ ಅವನಿಗೆ ಹೊಡಿಬೇಕು ಅನ್ನಿಸಿದ್ರೆ ಆ ಹೊತ್ತಿನಲ್ಲಿಯೇ ಹೊಡಿತಾ ಇದ್ದ. ಅವನ ಹೊಡೆತ ನನ್ನಲ್ಲಿ ಯಾವಾಗ್ಲೂ ಗಂಡ ಅಂದ್ರೆ ಸಾಕು ಭಯ ಮೂಡಿಸ್ತಾ ಇತ್ತು. ಆದ್ರೆ ಅವನಿಂದ ಹೊರಗೆ ಬಂದ ಮೇಲೆ ಯಾವುದೇ ರೀತಿಯ ಭಯ ಇಲ್ಲ. ನನಗೆ ಅವನಿಂದ ಬಿಡುಗಡೆ ಸಿಕ್ಕಿದ್ದ ಮೇಲ್ ತುಂಬಾ ಸಂತೋಷ ಆಯ್ತು. ನನ್ನ ಮನಸ್ಸಿಗೆ ಆವಾಗ ನೆಮ್ಮದಿ ಸಿಗ್ತು" ಎಂದು ಹೇಳುತ್ತಾರೆ. ಗಂಡನ ಜೊತೆ ಜೀವನ ಮಾಡುತ್ತಿದ್ದಂತಹ ಸಂದರ್ಭದಲ್ಲಿ ಅವನ ಅಭಿರುಚಿಗೆ ತಕ್ಕಂತೆ ವರ್ತಿಸಬೇಕು. ಅದನ್ನವಳು ವಿರೋಧಿಸುವ ಹಾಗಿಲ್ಲ. ವಿರೋಧಿಸಿದರೆ ಗಂಡನ ಕಿರುಕುಳವನ್ನು ಅನುಭವಿಸಬೇಕು. ಆದರೆ ಇಂತಹ ಸ್ಥಿತಿಯು ವಿಚ್ಛೇದನೆಯ ನಂತರದ ಬದುಕಿನಲ್ಲಿ ಕಂಡು ಬರುವುದಿಲ್ಲ. ಅವರ ಜೀವನವನ್ನು ಪರರಿಗಾಗಿ ಸವೆಸದೇ ತಮ್ಮ ಅಭಿರುಚಿಗೆ ಅನುಗುಣವಾಗಿ ಜೀವನ ನಡೆಸುವ ಮೂಲಕ ನೆಮ್ಮದಿಯ ಬದುಕನ್ನು ಕಂಡುಕೊಂಡಿದ್ದಾರೆ.

- **ಸ್ವಾತಂತ್ರ್ಯದ ಜೀವನಕ್ಕೆ ಅವಕಾಶ**

ಹಿಂಸಿಸುವ ಗಂಡನ ಕಾಟಗಳಿಂದ ತಪ್ಪಿಸಿಕೊಳ್ಳಲು ವಿವಾಹ-ವಿಚ್ಛೇದನವು ಒಂದು ದಾರಿಯಾಗಿದೆ. ಸ್ತ್ರೀಯರಿಗೆ ವಿವಾಹ-ವಿಚ್ಛೇದನವು ಸ್ವತಂತ್ರ ಜೀವನ ನಡೆಸಲು ಅನುಕೂಲ ಮಾಡಿಕೊಡುತ್ತದೆ. ಡಾ. (ಶ್ರೀಮತಿ) ಎ. ರಾಮನ್ನಮ್ಮವರು ಕೈಗೊಂಡ "ಗ್ರ್ಯಾಜುವ್ಹೇಟ್ ಎಂಪ್ಲಾಯಿಡ್ ವುಮೆನ್ ಇನ್ ಎನ್ ಅರ್ಬನ್ ಸೆಟ್ಟಿಂಗ್" ಎಂಬ ಅಧ್ಯಯನದಲ್ಲಿ "ಸತ್ತು ಜೀವನ ನಡೆಸುವುದಕ್ಕಿಂತ ವಿವಾಹ-ವಿಚ್ಛೇದನ ಹೊಂದಿ ಸ್ವತಂತ್ರ ಜೀವನ ನಡೆಸುವುದೇ ಲೇಸು" ಎಂದು ವ್ಯಕ್ತಗೊಳಿಸಿದ ಉದ್ಯೋಗಸ್ಥ ಮಹಿಳೆಯರ ಅಭಿಪ್ರಾಯ ಉಲ್ಲೇಖನೀಯ (ಮೌಳಿ ಎಚ್.ವಿ., ೧೯೮೯, ಪು. ೮೪).

ಮಹಿಳೆಯರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ ಎಂದು ಹೇಳುವ 'ಮನು'ವಿನ ನಿಲುವನ್ನು ಸುಳ್ಳು ಮಾಡುವಂತಹ ಮನೋಭಾವ ಇಂದಿನ ಮಹಿಳೆಯರಲ್ಲಿ ಕಂಡು ಬರುತ್ತದೆ. ನಮಗೂ ನಮ್ಮದೇ ಆದ ಜೀವನವಿದೆ. ಆ ಜೀವನವನ್ನು ನಮ್ಮ ಇಚ್ಛೆಗನುಗುಣವಾಗಿ ಸಾಗಿಸುವಲ್ಲಿ ನಾವು ಸ್ವತಂತ್ರರು ಎನ್ನುವಂತಹ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ತಮ್ಮ ಆಸೆ-ಆಕಾಂಕ್ಷೆ ಅಭಿರುಚಿಗೆ ತಕ್ಕಂತೆ ತಮ್ಮ ಜೀವನ ನಡೆಸು ತ್ತಿರುವ ಇವರು ತಮ್ಮ ಜೀವನದ ಪ್ರತಿಯೊಂದು ಹಂತದಲ್ಲಿನ ಕೆಲಸ ಕಾರ್ಯಗಳಿಗೆ ಸಂಬಂಧಿಸಿದಂತೆ ಸ್ವತಂತ್ರ ನಿರ್ಣಯವನ್ನು ತೆಗೆದುಕೊಳ್ಳುವರು. ಮಹಿಳೆಯರ ಬದುಕು ನಾಲ್ಕು ಗೋಡೆಗಳಿಗೆ ಸೀಮಿತ ಎನ್ನುವಂತಹ ಸ್ಥಿತಿಯಿಂದ ಹೊರಬಂದು ಸ್ವತಂತ್ರದಿಂದ ತಮ್ಮ ಜೀವನವನ್ನು ನಡೆಸುತ್ತಿರುವರು.

ಗಂಡನ ಜೊತೆ ವಾಸಿಸುತ್ತಿರುವಂತಹ ಸಂದರ್ಭದಲ್ಲಿ ಹೆಂಡತಿಯಾದವಳು ಎಲ್ಲಿಗೆ ಹೋಗಬೇಕು. ಯಾರನ್ನು ಮಾತನಾಡಿಸಬೇಕು ಎನ್ನುವುದರಿಂದಿಡಿದು ಅವರ ಪ್ರತಿಯೊಂದು ಕೆಲಸವನ್ನು ಗಂಡನೇ ನಿರ್ಣಯಿಸುವಂಥದ್ದು ಕಂಡು ಬರುತ್ತದೆ. ಹಾಗೆ ಕುಟುಂಬದ ಪ್ರತಿಯೊಂದು ವಿಷಯವು ತನ್ನ ಆಜ್ಞೆಯ

ಮೇಲೆಯೇ ನಡೆಯಬೇಕೆನ್ನುವಂತಹದ್ದು. ಹೆಂಡತಿಯ ಸ್ವಾತಂತ್ರ್ಯ ಗಂಡನ ಕೈಯಲ್ಲಿ ಎನ್ನುವಂಥ ಸ್ಥಿತಿಯನ್ನು ಸೂಚಿಸುತ್ತದೆ. ಇಂತಹ ಸ್ಥಿತಿಯಿಂದ ಮುಕ್ತಿ ಹೊಂದಿ ಸ್ವತಂತ್ರವಾಗಿ ಜೀವನ ನಡೆಸುವಂತಹ ಅವಕಾಶವನ್ನು ವಿಚ್ಛೇದನೆ ಪಡೆದ ನಂತರದ ಬದುಕು ಕಲ್ಪಿಸುವುದರ ಜೊತೆಗೆ ಆ ನಿಟ್ಟಿನಲ್ಲಿ ಅವರು ಜೀವನ ನಡೆಸುವಂತೆ ಅವರಲ್ಲಿ ಆತ್ಮವಿಶ್ವಾಸವನ್ನು ಮೂಡಿಸುತ್ತಲಿದೆ.

ತಾವು ಸಂಪಾದನೆ ಮಾಡಿದ ಹಣದ ಮೇಲೆಯೇ ಅಧಿಕಾರ ಹೊಂದಿರಲಾರದಂತಹ ಸ್ಥಿತಿಯು ವಿವಾಹ ಬಂಧನದಲ್ಲಿ ಇರುವಂಥ ಸಂದರ್ಭದಲ್ಲಿ ಕಂಡು ಬಂದರೆ, ಇಂತಹ ಸ್ಥಿತಿಯಿಂದ ಬಿಡುಗಡೆಯನ್ನು ವಿಚ್ಛೇದನೆಯ ನಂತರದ ಬದುಕು ಕಲ್ಪಿಸುತ್ತದೆ. ತಮ್ಮ ಸಾಮರ್ಥ್ಯದಿಂದ ಸಂಪಾದನೆ ಮಾಡಿದಂತಹ ಹಣವನ್ನು ತಮ್ಮ ಇಚ್ಛೆಗನುಗುಣವಾಗಿ ವೆಚ್ಚ ಮಾಡುವಂತಹದ್ದನ್ನು ಇಲ್ಲಿ ಕಾಣಬಹುದಾಗಿದೆ. ಸ್ವಾತಂತ್ರ್ಯ ರಹಿತ ಜೀವನವು ಮಹಿಳೆಯರ ಸಾಮರ್ಥ್ಯವನ್ನು ಕುಂಠಿತಗೊಳಿಸುತ್ತದೆ. ಅವಳ ಸಾಮರ್ಥ್ಯವೇನಿದ್ದರೂ ವಿವಾಹದ ನಂತರ ಗಂಡನನ್ನು ಹೇಗೆ ನೋಡಿಕೊಳ್ಳಬೇಕು. ಮಕ್ಕಳ ಪಾಲನೆ ಹೇಗೆ ನಿರ್ವಹಿಸಬೇಕು ಎಂಬಲ್ಲಿಗೆ ಸೀಮಿತವಾಗಿಸುವ ಸ್ಥಿತಿಯು ಅವರ ನಿಜವಾದ ವ್ಯಕ್ತಿತ್ವವನ್ನು ಮರೆಮಾಚಿಸುತ್ತದೆ. ಹೀಗೆ ಮರೆಮಾಚಿ ಹೋಗಿರುವಂಥ ವ್ಯಕ್ತಿತ್ವವನ್ನು ಬೆಳಕಿಗೆ ತರುವಂತಹ ಸ್ಥಿತಿಯನ್ನು ವಿಚ್ಛೇದನೆಯ ನಂತರದ ಜೀವನದಲ್ಲಿ ಮಹಿಳೆಯರು ಕಂಡುಕೊಳ್ಳುತ್ತಾರೆ.

- **ಸ್ವಾವಲಂಬನೆಯ ಬದುಕು**

ವಿವಾಹಿತ ಮಹಿಳೆಯರು ಗಂಡನ ಮನೆಯಲ್ಲಿ ಗಂಡನ ಸೇವಕಿಯಂತೆ ಜೀವನ ನಡೆಸುವಂತಹ ಸ್ಥಿತಿಯನ್ನು ತಿಳಿಸಿದರೆ ವಿಚ್ಛೇದನೆಯ ನಂತರ ಯಾರ ಸೇವಕಿಯಾಗಿರದೆ ಸ್ವಾವಲಂಬನೆಯಿಂದ ಜೀವನ ನಡೆಸುವಂತಹ ಸ್ಥಿತಿಯನ್ನು ತಿಳಿಸುತ್ತದೆ.

ಸಮಾಜದಲ್ಲಿ ಮಹಿಳೆಯರಿಗೆ ಪುರುಷರ ಬೆಂಬಲವಿರಲೇಬೇಕು. ಅವರ ಬೆಂಬಲವಿಲ್ಲದೆ ಇವರು ಜೀವನ ನಡೆಸಲು ಅಸಮರ್ಥರು ಎನ್ನುವಂತಹ ಪುರುಷಶಾಹಿ ನಿಲುವನ್ನು ಈ ಮಹಿಳೆಯರು ಸುಳ್ಳೆಂದು ಸಾಧಿಸಿ ತೋರಿಸುತ್ತಾರೆ. ವಿಚ್ಛೇದನೆಯ ನಂತರ ಸಂಪಾದನೆ ಮಾಡುವಂತಹ ಪ್ರವೃತ್ತಿಯನ್ನು ಬೆಳೆಸಿಕೊಂಡು ಜೀವನ ಮಾಡುತ್ತಿದ್ದಾರೆ. ಈಗಾಗಲೇ ಉದ್ಯೋಗದಲ್ಲಿ ಇರುವಂತಹ ಮಹಿಳೆಯರು ತಾವು ಸಂಪಾದಿಸಿದ ಹಣದ ಮೇಲೆ ಸಂಪೂರ್ಣ ಒಡೆತನವನ್ನು ಹೊಂದಿ ಪುರುಷರ ಆಶ್ರಯವಿಲ್ಲದೆ ನಾವು ಬದುಕ ಬಲ್ಲೆವು ಎಂಬುದನ್ನು ತೋರಿಸಿಕೊಡುತ್ತಿದ್ದಾರೆ.

ಪುರುಷಪ್ರಧಾನ ವ್ಯವಸ್ಥೆಯು ವಿಚ್ಛೇದಿತ ಮಹಿಳೆಯನ್ನು 'ಗಂಡ ಬಿಟ್ಟವಳು' ಎಂದು ನಿಂದಿಸುತ್ತದೆ. ಈ ನಿಂದನೆಯ ಹಿಂದೆ ಪುರುಷಶಾಹಿಯ ಅಧಿಕಾರವಿದೆ. ಹೀಗೆ ಕರೆಯುವ ಮೂಲಕ ಮಹಿಳೆಯರನ್ನು ವಿವಾಹ ಬಂಧನದಿಂದಾಚೆ ಹೊರಬಾರದಂತೆ ಬಂಧಿಸಿಡುವ ರಾಜಕಾರಣವನ್ನು ಮಾಡುತ್ತಿದೆ. ಆದರೆ ಇಂತಹ ರಾಜಕಾರಣಕ್ಕೆ ಬಲಿಯಾಗದೆ, ಇಂತಹ ಸ್ಥಿತಿಯ ಬಗ್ಗೆ ತಲೆಕೆಡಿಸಿಕೊಳ್ಳದೇ ಹೀಗೆ ನಿಂದಿಸುವವರ ನಡುವೆಯು ನಾವು ಬದುಕಬಲ್ಲೆವು ಎನ್ನುವುದನ್ನು ತೋರಿಸಿಕೊಡುತ್ತಿರುವುದು ಆಶಾದಾಯಕದ ವಿಚಾರವಾಗಿದೆ. ಇದನ್ನು

ಸ್ಪಷ್ಟಪಡಿಸಿಕೊಳ್ಳಲು ನಾನಿಲ್ಲಿ ಒಂದು ಪ್ರಕರಣವನ್ನು ತಿಳಿಸಬಯಸುವೆ. ೩೪ ವರ್ಷದ ಶಾರದಾರವರ ವಿವಾಹವಾಗಿ ೧೦ ವರ್ಷವಾಗಿದ್ದು, ವಿವಾಹವಾಗಿ ೫ನೇ ವರ್ಷಕ್ಕೆ ಗಂಡನ ಕಿರುಕುಳ ತಾಳಲಾರದೆ ವಿಚ್ಛೇದನೆ ಪಡೆದು ತವರಿನಲ್ಲಿ ವಾಸಿಸುತ್ತಿರುವರು. ವಿಚ್ಛೇದನೆ ಪಡೆದಂತಹ ಸಂದರ್ಭದಲ್ಲಿ ಅವರ ಗಂಡ ಹಾಗೂ ಇತರೆ ಸಂಬಂಧಿಕರು ಗಂಡನ ಆಶ್ರಯವಿಲ್ಲದೆ ಅದು ಹೇಗೆ ಜೀವನ ಮಾಡ್ತೀಯ ಅಂತ ನಾವು ನೋಡ್ತೇವೆ. ಒಂಟಿ ಹೆಣ್ಣು ಗಂಡನನ್ನು ಬಿಟ್ಟು ಬದುಕೋದು ಸುಲಭವಲ್ಲ, ಗಂಡನನ್ನು ಬಿಟ್ಟವಳು ಎಂದು ಎಲ್ಲರೂ ಹಂಗಿಸುತ್ತಾರೆ ಎನ್ನುವಂತಹ ಮಾತುಗಳನ್ನಾಡಿದವರೇ ಹೆಚ್ಚು. ಆ ಸಂದರ್ಭದಲ್ಲಿ ಇವರು ಭಯಪಡದೇ ವಿಚ್ಛೇದನೆ ಪಡೆದ ಸ್ವಲ್ಪ ದಿನದಲ್ಲೇನೇ ಕೆಲಸಕ್ಕೆ ಸೇರಿ ನಾನು ಗಂಡನ ಆಶ್ರಯವಿಲ್ಲದೆ ಬದುಕು ಬಲ್ಲೆನೆನ್ನುವುದನ್ನು ತೋರಿಸಿಕೊಟ್ಟಿದ್ದಾರೆ. ಹೀಗೆ ಎಷ್ಟೋ ಸಂಖ್ಯೆಯ ಮಹಿಳೆಯರು ವಿಚ್ಛೇದನೆಯ ನಂತರ ತಮ್ಮ ಬದುಕನ್ನು ಉತ್ತಮವಾಗಿಸಿಕೊಂಡಿದ್ದಾರೆ.

ವಿವಾಹ ಬಂಧನದಲ್ಲಿ ಗಂಡನಿಗಾಗಿ ತಮ್ಮ ಬದುಕನ್ನು ಸವೆಸುತ್ತಿದ್ದರೆ, ಈ ಬಂಧನದಿಂದ ಹೊರಬಂದ ನಂತರ ತಮಗಾಗಿ ತಮ್ಮ ಬದುಕನ್ನು ನಡೆಸುತ್ತಿರುವವರಿವರಾಗಿದ್ದಾರೆ. ವೈವಾಹಿಕ ಸಂದರ್ಭದಲ್ಲಿ ತಮ್ಮತನಕ್ಕೆ ಯಾವುದೇ ಬೆಲೆ ಇಲ್ಲದೆ, ಜೀವವಿದ್ದರೂ ನಿರ್ಜೀವ ವಸ್ತುವಿನಂತೆ ಬದುಕುವಂತಹ ಸ್ಥಿತಿಯು ಕಂಡು ಬಂದರೆ, ತಮ್ಮನ್ನು ತಾವು ಗುರುತಿಸಿಕೊಂಡು ಸ್ವಾಭಿಮಾನದಿಂದ ಸ್ವಾವಲಂಬನೆಯಿಂದ ಬದುಕುವಂತಹ ಸ್ಥಿತಿಯು ವಿವಾಹ ಬಂಧನದಿಂದ ಹೊರಬಂದು ಜೀವಿಸುತ್ತಿರುವಂಥ ಸಂದರ್ಭದಲ್ಲಿ ಕಂಡು ಬರುತ್ತದೆ.

- **ವ್ಯಕ್ತಿತ್ವದ ಬೆಳವಣಿಗೆ**

ವಿವಾಹದ ಬಳಿಕ ಮಹಿಳೆಯರ ವ್ಯಕ್ತಿತ್ವವು ಗಂಡ, ಮನೆ, ಮಕ್ಕಳು ಇವುಗಳಿಗೆ ಸೀಮಿತವಾಗುತ್ತದೆ ವಿನಃ ಅವರು ತಮ್ಮ ಸಾಮರ್ಥ್ಯದಿಂದ ಶಿಕ್ಷಣ ಪಡೆದು ಉದ್ಯೋಗ ಮಾಡುತ್ತಿರಲಿ ಅಥವಾ ಇತರೆ ಯಾವುದೇ ವ್ಯವಹಾರದಲ್ಲಿ ತಮ್ಮತನವನ್ನು ಗುರುತಿಸಿಕೊಂಡಿದ್ದರೂ ಅವು ಮುಖ್ಯವಾಗುವುದಿಲ್ಲ. ಕುಟುಂಬದಾಚೆಗೂ ಮಹಿಳೆಯರಿಗೆ ಅವರದೇ ಆದ ಅಸ್ತಿತ್ವವಿದೆ ಎನ್ನುವುದನ್ನು ಪುರುಷಶಾಹಿ ವ್ಯವಸ್ಥೆ ಗುರುತಿಸುವುದಿಲ್ಲ. ಗುರುತಿಸಿದರೂ ಅದು ಪ್ರಮುಖವಾಗುವುದಿಲ್ಲ ಮತ್ತು ಅದನ್ನು ಸಮಾಜ ಮಾನ್ಯ ಮಾಡುವುದಿಲ್ಲ.

ಆದರೆ ವಿವಾಹ ಬಂಧನದಿಂದ ಹೊರಬಂದು ಜೀವನ ನಡೆಸುತ್ತಿರುವ ಮಹಿಳೆಯರು ತಮ್ಮ ವ್ಯಕ್ತಿತ್ವವನ್ನು ಬೆಳವಣಿಗೆಯ ದಾರಿಯತ್ತ ಕೊಂಡೊಯ್ಯುತ್ತಿರುವುದನ್ನು ಕಾಣಬಹುದಾಗಿದೆ. ನಮಗೂ ನಮ್ಮದೇ ಆದ ವ್ಯಕ್ತಿತ್ವವಿದೆ ಎಂದು ತೋರಿಸಿಕೊಟ್ಟಿರುವಂತಹ ಮಹಿಳೆಯರು ಇವರಾಗಿರುವರು. ವಿಚ್ಛೇದನೆ ನಂತರದ ಬದುಕು ತಮ್ಮ ವ್ಯಕ್ತಿತ್ವವನ್ನು ಗುರುತಿಸಿಕೊಂಡವರಿಗೆ ಪ್ರಗತಿಪಥದತ್ತ ನಡೆಯುವಂತೆ ಮಾಡಿದರೆ, ಮತ್ತೆ ಕೆಲವರಿಗೆ ನಮಗೂ ನಮ್ಮದೇ ಆದ ವ್ಯಕ್ತಿತ್ವವಿದೆ ಎನ್ನುವುದರ ಬಗ್ಗೆ ಅರಿವು ಮೂಡಿಸುತ್ತದೆ. ನಾಲ್ಕು ಗೋಡೆಗೆ ಸೀಮಿತವಾಗಿದ್ದಂತಹ ಮಹಿಳೆಯರ ಬದುಕನ್ನು ಹೊರಗಿನ ಪ್ರಪಂಚಕ್ಕೆ ಬರುವಂತೆ ಮಾಡುತ್ತಿದೆ. ಒಟ್ಟಿನಲ್ಲಿ ಹೇಳುವುದಾದರೆ ವಿಚ್ಛೇದನೆಯ ನಂತರದ ಬದುಕು ಮಹಿಳೆಯರಿಗೆ ಅವರದೇ ಆದ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಲ್ಲಿ ಮತ್ತು ಬೆಳೆಸಿಕೊಳ್ಳುವಲ್ಲಿ ಸಹಾಯವಾಗಿದೆ.

• **ಆತ್ಮಬಲ ಮತ್ತು ಮನೋಸ್ಥೈರ್ಯ**

ವಿವಾಹದ ನಂತರ ಮಹಿಳೆಯರ ಬದುಕನ್ನು ನಾಲ್ಕು ಗೋಡೆಗಳ ಮಧ್ಯೆ ಸೀಮಿತ ಮಾಡಿ, ಇದೇ ನಿಮ್ಮ ಜೀವನ. ಇದರಾಚೆ ನಿಮಗೆ ಬದುಕಿಲ್ಲ ಎನ್ನುವಂಥ ಸಮಾಜದಲ್ಲಿ ಸಿಲುಕಿದ ಮಹಿಳೆಯರು. ಇಂತಹ ಸ್ಥಿತಿಯಲ್ಲಿ ಹಲವು ಬಗೆಯ ಸಂಕಷ್ಟಗಳನ್ನು ಎದುರಿಸುತ್ತಿದ್ದರಾದರು. ಇಂತಹ ಸ್ಥಿತಿಯಿಂದ ಹೊರಬಂದು ಆತ್ಮಬಲ ಮತ್ತು ಮನೋಸ್ಥೈರ್ಯದಿಂದ ಜೀವನ ನಡೆಸುವಂತಹದ್ದನ್ನು ವಿಚ್ಛೇದನೆಯ ನಂತರದ ಬದುಕಿನಲ್ಲಿ ಕಾಣಬಹುದಾಗಿದೆ. ವಿಚ್ಛೇದನೆ ಪಡೆಯಬೇಕು ಎಂಬ ಭಾವನೆ ಮಹಿಳೆಯರಲ್ಲಿ ಮೂಡುವುದೇ ಪ್ರಗತಿಯ ಹೆಜ್ಜೆಯಾಗಿದೆ. ಕೆಲವು ವಿಚ್ಛೇದಿತ ಮಹಿಳೆಯರು ತಿಳಿಸುವ ಪ್ರಕಾರ ಗಂಡನೇ ದೇವರೆಂದು ನಂಬಿ, ಗಂಡನ ಮನೆಯಲ್ಲಿಯೇ ನಮ್ಮ ಅಸ್ತಿತ್ವವೆಂದು ಭಾವಿಸಿ ಜೀವನ ನಡೆಸುತ್ತಿದ್ದಂತಹ ಸಂದರ್ಭದಲ್ಲಿ ಗಂಡನ ಹಿಂಸೆ ತಾಳಲಾರದೇ ಬೇರೆಯವರ ಮಾರ್ಗದರ್ಶನದ ಮೇರೆಗೆ ವಿಚ್ಛೇದನೆ ಪಡೆಯುವಂಥ ಸಂದರ್ಭದಲ್ಲಿ ನ್ಯಾಯಾಲಯದ ವಾದ-ವಿವಾದಗಳಲ್ಲಿ ಭಾಗವಹಿಸಿ ಹೊರಗಿನ ಪ್ರಪಂಚಕ್ಕೆ ಮುಖಾಮುಖಿಯಾಗುವ ಮೂಲಕ ನಾವು ಗಂಡನ ಆಶ್ರಯವಿಲ್ಲದೆ ಬದುಕಬಲ್ಲೆವು ಎನ್ನುವ ನಿಟ್ಟಿನಲ್ಲಿ ತಮ್ಮಲ್ಲಿ ಆತ್ಮಬಲ ಮತ್ತು ಮನೋಸ್ಥೈರ್ಯಗಳಂತಹ ಭಾವನೆಯನ್ನು ತಮ್ಮಲ್ಲಿ ಮೂಡಿಸಿಕೊಂಡಿದ್ದಾರೆ.

ಮುಂದಿನ ಜೀವನದಲ್ಲಿ ಯಾವುದೇ ಬಗೆಯ ಸಂಕಷ್ಟದ ಪರಿಸ್ಥಿತಿ ಎದುರಾದರು. ಅದನ್ನು ಆತ್ಮಬಲದಿಂದ, ಧೈರ್ಯವಾಗಿ ಎದುರಿಸಿ ತಮ್ಮ ಬದುಕನ್ನು ತಮ್ಮ ಇಚ್ಛೆಗನುಗುಣವಾಗಿಕಟ್ಟಿಕೊಂಡು ಬದುಕುತ್ತಿರುವರು.

ಇದುವರೆಗೂ ವಿಚ್ಛೇದನೆಯ ನಂತರದ ಬದುಕಿಗೆ ಸಂಬಂಧಿಸಿದಂತೆ ಇತ್ಯಾತ್ಮಕ ಪ್ರತಿಕ್ರಿಯೆಯನ್ನು ತಿಳಿಯಲಾಯಿತು. ಇನ್ನೂ ಮುಂದೆ ವಿಚ್ಛೇದನೆಯ ನಂತರದ ಬದುಕಿಗೆ ಸಂಬಂಧಿಸಿದಂತೆ ನೇತ್ಯಾತ್ಮಕ ಅಂಶಗಳನ್ನು ತಿಳಿಯಬಹುದಾಗಿದ್ದು ನಾಲ್ಕು ಅಂಶಗಳಲ್ಲಿ ಅದನ್ನು ಸ್ಪಷ್ಟಪಡಿಸಲಾಗಿದೆ.

- ನಿಂದನೆಗೆ ಒಳಗಾಗುವುದು.
- ವಾಸಸ್ಥಳದ ಸಮಸ್ಯೆ.
- ಭದ್ರತೆಯ ಸಮಸ್ಯೆ.
- ಜೀವನಾಂಶದ ಸಮಸ್ಯೆ.

• **ನಿಂದನೆಗೆ ಒಳಗಾಗುವುದು**

ಸಾಂಪ್ರದಾಯಿಕ ಪುರುಷಪ್ರಧಾನ ಸಮಾಜದಲ್ಲಿ ವಿಚ್ಛೇದನೆ ಪಡೆದ ಮಹಿಳೆಯರನ್ನು "ಗಂಡ ಬಿಟ್ಟವಳು" ಎಂದು ನಿಂದಿಸುವುದುಂಟು. ಈ ಸಮಾಜ ವ್ಯವಸ್ಥೆ ವಿಚ್ಛೇದಿತ ಮಹಿಳೆಯರನ್ನು ಬಯಸುವುದೂ ಇಲ್ಲ, ಗೌರವಿಸುವುದು ಇಲ್ಲ. ಆಕೆ ದುಡಿಯುವ ಮಹಿಳೆಯಾದರೂ ಸರಿ, ಆರ್ಥಿಕವಾಗಿ ಸಬಲತೆಯನ್ನು

ಹೊಂದಿರುವಂತಹ ಮಹಿಳೆಯಾದರೂ ಸರಿ, ಇತರೆ ಯಾವ ವಿಚ್ಛೇದಿತ ಮಹಿಳೆಯಾದರೂ ಸರಿ, ಸಮಾಜದ ವ್ಯಂಗ, ಟೀಕೆ, ಅಪಹಾಸ್ಯಗಳಿಗೆ ಒಳಗಾಗುವಂತಹ ಸ್ಥಿತಿಯನ್ನು ಈ ವ್ಯವಸ್ಥೆ ರೂಪಿಸಿದೆ.

ಸಮಾಜದ ಇತರೆ ಸದಸ್ಯರು ನಿಂದಿಸುವುದಕ್ಕಿಂತ ತನ್ನವರೇ ಆದ ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ, ಇತರೆ ಸದಸ್ಯರಿಂದ ಟೀಕೆಗೆ ಒಳಗಾಗುವುದು ಎಷ್ಟರಮಟ್ಟಿಗೆ ಸಮಂಜಸ? ವಿಚ್ಛೇದಿತ ಮಹಿಳೆ ತವರು ಮನೆಯಲ್ಲಿಯೇ ಇದ್ದರಂತೂ ಈ ಟೀಕೆಯ ಸ್ವರೂಪ ತೀವ್ರವಾಗಿರುತ್ತದೆ. "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಎನ್ನುವ ಮನೋಭಾವನೆಯಿಂದಾಗಿ ಈ ಮಹಿಳೆಯರು ತಾವು ಹುಟ್ಟಿ ಬೆಳೆದ ಮನೆಯಲ್ಲಿ ಪರಕೀಯತೆಯನ್ನು ಅನುಭವಿಸಬೇಕಾಗುತ್ತದೆ. ವಿಚ್ಛೇದಿತ ಮಹಿಳೆ ಊಟದಿಂದ ಹಿಡಿದು ಪ್ರತಿಯೊಂದು ವಿಷಯದಲ್ಲೂ ಪರಕೀಯತೆಯನ್ನು ಅನುಭವಿಸುತ್ತಾಳೆ. ಆರ್ಥಿಕವಾಗಿ ಸಬಲತೆಯನ್ನು ಹೊಂದಿರುವ ಮಹಿಳೆಗೆ ಊಟ-ತಿಂಡಿ ವಿಷಯದಲ್ಲಿ ತೊಂದರೆಯಾಗದಿದ್ದರೂ ನಿಂದನೆ ಮಾತ್ರ ತಪ್ಪಿದ್ದಲ್ಲ. ವಿಚ್ಛೇದಿತ ಸ್ತ್ರೀಯರಿಗೆ ಇನ್ನೂ ವಿವಾಹವಾಗದೇ ಇರುವ ತಂಗಿಯರಿದ್ದು, ಅವರ ವಿವಾಹವು ಆಕೆಯ ವಿಚ್ಛೇದನೆಯ ವಿಷಯವನ್ನೇ ಆಧಾರವಾಗಿಟ್ಟುಕೊಂಡು ವಿವಾಹ ಸಂಬಂಧಗಳು ಕೂಡದೇ ಹೋದರೆ ತನ್ನವರಿಗೇ ಅವಳು ಅನಿಷ್ಟವಾಗಿ ಕಾಣಿಸಿಕೊಳ್ಳುತ್ತಾಳೆ. ವಿಚ್ಛೇದಿತ ಮಹಿಳೆಯರು ತವರಿನಲ್ಲಿಯೇ ಇರಲಿ ಅಥವಾ ಪ್ರತ್ಯೇಕವಾಗಿಯೇ ಇರಲಿ, ವಿಚ್ಛೇದಿತ ಪುರುಷರು ರಾಜರೋಷವಾಗಿ ಸಮಾಜದಲ್ಲಿ ಬದುಕುವಷ್ಟು ಸುಲಭವಾಗಿ ಮಹಿಳೆಯರು ಬದುಕಲಾರದಂತಹ ಸ್ಥಿತಿ ಮುಂದುವರೆದಿದೆ. ತನ್ನವರಿಂದಿರಬಹುದು ಅಥವಾ ಸಮಾಜದ ಇತರೆ ಸದಸ್ಯರಿಂದಿರಬಹುದು, ವಿಚ್ಛೇದಿತ ಮಹಿಳೆಯರು ಒಳಗಾಗುವ ನಿಂದನೆಗಳು, ಟೀಕೆಗಳು ಅಪಹಾಸ್ಯಗಳ ಪುರುಷಪ್ರಧಾನ ವ್ಯವಸ್ಥೆಯ ಸಾಂಪ್ರದಾಯಿಕ ಮೌಲ್ಯಗಳಿಂದಲೇ ತಲೆದೋರಿರುತ್ತವೆ.

- **ವಾಸಸ್ಥಳದ ಸಮಸ್ಯೆ**

ತವರು ಮನೆಯಲ್ಲಿ ಕೊಟ್ಟ ಮನೆಗೆ ಹೋಗುವವಳು ಎಂಬ ಕಾರಣಕ್ಕೆ ಗಂಡನ ಮನೆಯಲ್ಲಿ ಬೇರೆ ಮನೆಯಿಂದ ಬಂದವಳು ಎಂಬ ಕಾರಣಕ್ಕೆ ನಿರ್ಲಕ್ಷ್ಯಕ್ಕೆ ಒಳಗಾಗುವ ಮಹಿಳೆಯರಿಗೆ ತಮ್ಮದು ಎಂದು ಗುರುತಿಸಿಕೊಳ್ಳುವ ಯಾವುದೇ ಮನೆಯು ಇರುವುದಿಲ್ಲ. ಸಾಮಾನ್ಯವಾಗಿ ವಿವಾಹಿತ ಸ್ತ್ರೀಯು ವಿವಾಹದ ನಂತರ ತನ್ನ ವಾಸಸ್ಥಳವನ್ನು ತಂದೆಯ ಮನೆಯಿಂದ ಗಂಡನ ಮನೆಗೆ ಬದಲಾಯಿಸಿಕೊಳ್ಳುವ ಸ್ಥಿತಿಯು ಮಹಿಳೆಗೆ ಅತಂತ್ರದ ಪರಿಸ್ಥಿತಿಯನ್ನು ಸೃಷ್ಟಿಸುವಲ್ಲಿ ಮಹತ್ವದ ಪಾತ್ರನಿರ್ವಹಿಸುತ್ತದೆ. ವಿವಾಹವಾಗಿ ಗಂಡನ ಹಿಂಸೆಗಳನ್ನು ತಾಳಲಾರದೇ ವಿಚ್ಛೇದನವನ್ನು ಪಡೆದ ನಂತರ ವಾಸಸ್ಥಳಕ್ಕೆ ಸಂಬಂಧಿಸಿದಂತೆ ಈ ಮಹಿಳೆಯರು ಅತಂತ್ರ ಸ್ಥಿತಿಗೊಳಗಾಗುತ್ತಾರೆ.

ವಾಸಸ್ಥಳದ ಸಮಸ್ಯೆಯು ವಿಚ್ಛೇದಿತ ಎಲ್ಲ ಮಹಿಳೆಯರಲ್ಲಿಯೂ ಕಂಡು ಬರುತ್ತದೆಂದು ಹೇಳಲಾಗದು. ಉದ್ಯೋಗದಲ್ಲಿರುವ ಮಹಿಳೆಯರು, ಆರ್ಥಿಕವಾಗಿ ಸ್ವಾವಲಂಬನೆ ಇರುವಂತಹ ಮಹಿಳೆಯರು ಬಾಡಿಗೆ ಮನೆಯಲ್ಲೋ ಅಥವಾ ಸ್ವಂತ ಮನೆಯಲ್ಲೋ ಇರಬಹುದು. ಇನ್ನೂ ಕೆಲವರು ತವರು ಮನೆಯಲ್ಲಿಯೂ ಇರಬಹುದು. ಆದರೆ ಇದಾವುದರ ಆಸರೆ ಇಲ್ಲದ ಮಹಿಳೆಯರು ವಿಚ್ಛೇದನೆಯಂಥ

ಸಂದರ್ಭದಲ್ಲಿ ವಾಸಸ್ಥಳಕ್ಕೆ ಸಂಬಂಧಿಸಿದಂತೆ ಸಮಸ್ಯೆಗೊಳಗಾಗುತ್ತಾರೆ. ಕೆಲವು ವಕೀಲರ ಅಭಿಪ್ರಾಯದಂತೆ ಈ ಬಗ್ಗೆ ಅನುಕೂಲತೆಯನ್ನು ಹೊಂದಿರುವಂಥವರೇ ಹೆಚ್ಚಾಗಿ ವಿಚ್ಛೇದನ ಪಡೆಯಲು ಬರುತ್ತಾರೆ. ತವರಿನಲ್ಲಿ ಆಸರೆ ಪಡೆದಿರುವಂತಹ ವಿಚ್ಛೇದಿತ ಮಹಿಳೆಯರಿಗೆ ವಿವಾಹಕ್ಕೆ ಮುಂಚೆ ತವರಿನವರು ಕೊಡುತ್ತಿದ್ದ ಅಲ್ಪ ಪ್ರಮಾಣದ ಪ್ರಾಶಸ್ತ್ಯವು ದೊರೆಯದೇ ಹೋಗಬಹುದು. ಯಾಕೆಂದರೆ ಗಂಡನ ಹಿಂಸೆಗಳನ್ನು ಸಹಿಸಿಕೊಂಡು ಗಂಡನ ಜೊತೆಯಲ್ಲಿ ಜೀವನ ಮಾಡುವಂತಹ ಮಗಳಿಗೆ ಕೊಡುವಷ್ಟು ಗೌರವ, ವಿಚ್ಛೇದನ ಹೊಂದಿ ತಮ್ಮ ಆಶ್ರಯ ಪಡೆದ ಮಗಳಿಗೆ ಕೊಡುವುದಿಲ್ಲ. ಇಂತಹ ವಾತಾವರಣದಲ್ಲಿ ನೆಲೆಸುವುದು ಸವಾಲಿನ ವಿಷಯ. ಈ ಬಗೆಯಲ್ಲಿನ ಪರಿಸ್ಥಿತಿಗಳು ಈ ಮಹಿಳೆಯರಿಗೆ ಮಾತ್ರ ಸಮಸ್ಯೆಯಾದರೆ ವಿಚ್ಛೇದಿತ ಪುರುಷರಿಗೆ ವಾಸಸ್ಥಳದ ಸಮಸ್ಯೆ ತಲೆದೊರುವುದಿಲ್ಲ. ಅವರಿಗೆ ವಿವಾಹ ಸಂದರ್ಭದಿಂದ ಹಿಡಿದು ವಿಚ್ಛೇದನ ಸಂದರ್ಭದಲ್ಲಿಯೂ ಯಾವುದೇ ಅತಂತ್ರ ಸ್ಥಿತಿ ಉಂಟಾಗುವುದಿಲ್ಲ. ವಿವಾಹದ ನಂತರ ಆತನ ವಾಸಸ್ಥಾನ ಪಲ್ಲಟವಾಗುವುದಿಲ್ಲ. ಆದರೆ ಮಹಿಳೆಯರ ವಿಷಯದಲ್ಲಿ ಹಾಗಿಲ್ಲ. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ' ಎಂದು ವಿವಾಹವಾದೊಡನೆ ತವರಿನ ಬಾಗಿಲು ಮುಚ್ಚುವ ಸಂಪ್ರದಾಯ ಇಂದಿಗೂ ನಮ್ಮ ಸಮಾಜದಲ್ಲಿದೆ. ಹಾಗೆಯೇ ಇನ್ನೂ ವೈವಾಹಿಕ ಸಂಬಂಧವೇ ಮುರಿದಿರುವಂಥ ಸಂದರ್ಭದಲ್ಲಿ ಗಂಡನ ಮನೆಯಲ್ಲಿಯೂ ವಾಸಿಸುವುದು ಸುಲಭವಲ್ಲ.

- **ಭದ್ರತೆಯ ಸಮಸ್ಯೆ**

ಭದ್ರತೆಯನ್ನು ಆರ್ಥಿಕ ಭದ್ರತೆ, ಸಾಮಾಜಿಕ ಭದ್ರತೆ ಎಂದು ವಿಂಗಡಿಸಬಹುದಾಗಿದೆ. ವಿಚ್ಛೇದಿತ ಮಹಿಳೆಗೆ ಕಾನೂನಿನಡಿಯಲ್ಲಿ ಆರ್ಥಿಕ ಭದ್ರತೆಯ ಅವಕಾಶವನ್ನು ಕಲ್ಪಿಸಲಾಗಿದೆ. ಆದರೆ ಸಾಮಾಜಿಕ ಭದ್ರತೆ ಅವಳಿಗೆ ದೊರೆಯುವುದೇ? ಎಂಬುದು ದೊಡ್ಡ ಪ್ರಶ್ನೆಯಾಗಿದೆ.

ಕಾನೂನಿನನ್ವಯ ಆರ್ಥಿಕ ಭದ್ರತೆಯನ್ನು ಮಹಿಳೆ ಪಡೆಯಬಹುದಾಗಿದೆ. ಆರ್ಥಿಕವಾಗಿ ಸಬಲತೆಯನ್ನು ಹೊಂದಿರುವಂತಹ ಗಂಡನಿಂದ ಹೆಂಡತಿಗೆ ಭದ್ರತೆ ನೀಡಬಹುದು. ಆದರೆ ಅವನೇ ಆರ್ಥಿಕವಾಗಿ ಸಬಲತೆಯನ್ನು ಹೊಂದಿಲ್ಲದಂತಹ ಸಂದರ್ಭದಲ್ಲಿ ಅವಳಿಗೆ ಆರ್ಥಿಕ ಭದ್ರತೆಯನ್ನು ಒದಗಿಸುವವರ್ಯಾರು? ತವರಿನವರ ಬೆಂಬಲವಿದ್ದರೆ ಪರವಾಗಿಲ್ಲ. ಒಂದು ವೇಳೆ ಇವರ ಬೆಂಬಲ ಸಹಾಯ ದೊರೆಯದೇ ಹೋದರೆ ಆರ್ಥಿಕ ಭದ್ರತೆ ಇಲ್ಲವಾಗುತ್ತದೆ. ಇನ್ನೂ ಕೆಲವು ಗಂಡಂದಿರ ಪ್ರವೃತ್ತಿ ಹೇಗಿರುತ್ತದೆಂದರೆ ಆರ್ಥಿಕವಾಗಿ ಸಬಲತೆಯನ್ನು ಹೊಂದಿದ್ದರೂ ನ್ಯಾಯಾಲಯದಲ್ಲಿ ಇಂತಿಷ್ಟು ಕೊಡಬೇಕೆಂದು ತೀರ್ಮಾನವಾಗಿದ್ದರೂ ಕೊಡುವ ವಿಷಯಕ್ಕೆ ಸಂಬಂಧಿಸಿದಂತೆ ಸತಾಯಿಸುವುದುಂಟು.

ಇನ್ನೂ ಸಾಮಾಜಿಕ ಭದ್ರತೆಯ ವಿಷಯಕ್ಕೆ ಬಂದರೆ ಸಾಮಾಜಿಕ ಭದ್ರತೆಯನ್ನು ದೈಹಿಕ ಭದ್ರತೆ, ಮಾನಸಿಕ ಭದ್ರತೆ ಎಂದು ವಿಂಗಡಿಸಬಹುದಾಗಿದೆ. 'ಹೆಣ್ಣು' ಎಂದಾಕ್ಷಣ ಅವಳನ್ನು ಕಾಮುಕ ದೃಷ್ಟಿಯಿಂದ ನೋಡುವಂತಹ ಎಷ್ಟೋ ಸಂಖ್ಯೆಯ ಪುರುಷರು ನಮ್ಮಲ್ಲಿ ಕಂಡು ಬರುತ್ತಾರೆ. ಇಂತಹ ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷನಿಂದ ದೈಹಿಕ ಅಭದ್ರತೆಗೆ ಒಳಗಾಗುವ ಮಹಿಳೆ ಕೇವಲ ವಿಚ್ಛೇದಿತ ಮಹಿಳೆ

ಮಾತ್ರವಲ್ಲ. ವಿಚ್ಛೇದಿತ ಮಹಿಳೆಯರಿಗೆ ತವರಿನ ಆಶ್ರಯ ದೊರೆತು, ತವರು ಮನೆಯಲ್ಲಿ ಇರುವಂಥ ಸಂದರ್ಭದಲ್ಲಿ ದೈಹಿಕ ಭದ್ರತೆ ತೀವ್ರ ಸ್ವರೂಪದ ಸಮಸ್ಯೆಯಾಗುವುದಿಲ್ಲ. ಆದರೆ ತವರಿನ ಆಶ್ರಯವಿಲ್ಲದ ಅಥವಾ ಇದ್ದರೂ ಪ್ರತ್ಯೇಕವಾಗಿ ಇರುವಂಥ ಸಂದರ್ಭದಲ್ಲಿ ಕಾಮುಕ ಪುರುಷರು ಅವರನ್ನು ಕೆಟ್ಟ ದೃಷ್ಟಿಯಿಂದಲೇ ನೋಡುತ್ತಾರೆ.

ಸಮಾಜದಲ್ಲಿ ಬೇರೂರಿರುವಂಥ ಸಾಂಪ್ರದಾಯಿಕ ಮೌಲ್ಯಗಳಿಂದಾಗಿ ಬಹುತೇಕರು ವಿಚ್ಛೇದಿತ ಮಹಿಳೆಯರಿಗೆ ಮಾನಸಿಕ ಭದ್ರತೆ ಇಲ್ಲದಂತೆ ಮಾಡುತ್ತಾರೆ. ಗಂಡನ ಹಿಂಸೆಗಳನ್ನೆಲ್ಲ ಸಹಿಸಿಕೊಂಡು ಪತಿಯೇ ಪರದೈವ ಎಂದು ಬಾಳುವಂಥ ಮಹಿಳೆಯರಿಗೆ ಕೊಡುವಷ್ಟು ಗೌರವ ವಿಚ್ಛೇದಿತ ಮಹಿಳೆಯರಿಗೆ ಕೊಡುವುದಿಲ್ಲ. ಈ ಮಹಿಳೆಯರು ಯಾವುದೇ ಸಮಾರಂಭಕ್ಕೆ ಹೋದರೆ ಅವರು ಹೋಗಿದ್ದೇ ಅಶುಭವೆಂದು ಭಾವಿಸುತ್ತಾರೆ. ಕೆಲಸದ ನಿಮಿತ್ತ ಎಲ್ಲಿಗಾದರೂ ಹೋದರೆ ಗಂಡನನ್ನು ಬಿಟ್ಟು ಬಂದಿದ್ದಾಳೆ ಎಂದು ಅವಳನ್ನು ಕನಿಷ್ಟವಾಗಿ ಕಾಣುತ್ತಾರೆ. ನಮ್ಮ ಜೀವನ ನಮ್ಮದು ಎಂದು ತಮ್ಮ ಪಾಡಿಗೆ ಅವರು ಬದುಕುತ್ತಿದ್ದರೆ ಅವರನ್ನು ಅವಹೇಳನ ಮಾಡುವ ಮೂಲಕ ಅವರಿಗೆ ಮಾನಸಿಕ ಭದ್ರತೆ ಇಲ್ಲದಂತೆ ಮಾಡುವ ಪ್ರವೃತ್ತಿ ಸಮಾಜದಲ್ಲಿದೆ.

- **ಜೀವನಾಂಶದ ಸಮಸ್ಯೆ**

ಗಂಡನ ಹಿಂಸೆಗಳನ್ನು ತಾಳಲಾರದೇ ವಿಚ್ಛೇದನೆಯನ್ನು ಪಡೆದ ನಂತರ ಕೆಲವು ಮಹಿಳೆಯರು ಜೀವನಾಂಶಕ್ಕೆ ಸಂಬಂಧಿಸಿದಂತೆ ತೊಂದರೆಗಳನ್ನು ಅನುಭವಿಸುತ್ತಾರೆ. ಹಿಂದೂ ವೈಯಕ್ತಿಕ ಕಾನೂನಿನಡಿಯಲ್ಲಿ ವೈವಾಹಿಕ ವ್ಯಾಜ್ಯದ ವಿಚಾರಣೆಯ ಕಾಲದಲ್ಲಿ ಹಾಗೂ ವ್ಯಾಜ್ಯ ಇತ್ಯರ್ಥಗೊಂಡ ನಂತರದ ಎರಡು ಸಂದರ್ಭಗಳಲ್ಲಿ ಹಿಂದೂ ಮಹಿಳೆ ತನ್ನ ಪತಿಯಿಂದ ಜೀವನಾಂಶವನ್ನು ಪಡೆಯಬಹುದಾಗಿದೆ.

ಸಾಮಾನ್ಯವಾಗಿ ಹೆಚ್ಚಿನ ಸಂಖ್ಯೆಯ ವಿವಾಹಿತ ಸ್ತ್ರೀಯರು ಆರ್ಥಿಕವಾಗಿ ಪತಿಯನ್ನು ಅವಲಂಬಿಸಿರುತ್ತಾರೆ. ಅವರು ಯಾವುದೇ ವರಮಾನವನ್ನು ಹೊಂದಿರುವುದಿಲ್ಲ. ಹಾಗಾಗಿ ವಿಚ್ಛೇದಿತ ಮಹಿಳೆಯರಿಗೆ ಮುಂದಿನ ತಮ್ಮ ಜೀವನ ನಿರ್ವಹಣೆಗೆ ಜೀವನಾಂಶದ ಅವಶ್ಯಕತೆ ಅನಿವಾರ್ಯವಾಗಿರುತ್ತದೆ. ಅನೇಕ ವಿಚ್ಛೇದನೆ ಪ್ರಕರಣಗಳಲ್ಲಿ ಪುರುಷ ತನ್ನ ಪತ್ನಿಗೆ ಜೀವನಾಂಶವನ್ನು ನೀಡದಿರುವುದು, ಕಾನೂನಿನ ಕೈಗೆ ಸಿಗದ ರೀತಿಯಲ್ಲಿ ಜೀವನಾಂಶ ಕೊಡುವುದರಲ್ಲಿ ಅನ್ಯಾಯ ಮಾಡುವುದು ನಡೆದುಕೊಂಡೇ ಬರುತ್ತಿವೆ. ಇಂತಹ ಸಂದರ್ಭಗಳು ಮಹಿಳೆಯರ ಬದುಕನ್ನು ಸಂದಿಗ್ಧ ಸ್ಥಿತಿಗೆ ತಲುಪಿಸುತ್ತದೆ.

ಜೀವನಾಂಶವನ್ನು ಎರಡು ಹಂತದಲ್ಲಿ ಪಡೆಯಬಹುದಾಗಿದೆ. ಮೊದಲನೆಯದು ಪ್ರಕರಣಗಳನ್ನು ಕೈಗೆತ್ತಿಕೊಂಡಾಗ, ಇದು ತಾತ್ಕಾಲಿಕ ಕ್ರಮ ಪ್ರಕರಣ ಇತ್ಯಾರ್ಥವಾಗುವವರೆಗೆ ಇದು ಚಾಲ್ತಿಯಲ್ಲಿರುತ್ತದೆ. ಎರಡನೆಯ ಹಂತದಲ್ಲಿ ಪ್ರಕರಣ ಕೊನೆಯಲ್ಲಿ ಅಂದರೆ ಪ್ರಕರಣ ಇತ್ಯರ್ಥವಾದಾಗ ಖಾಯಂ ಜೀವನಾಂಶವನ್ನು ನೀಡಲಾಗುವುದು. ಸಾಮಾನ್ಯವಾಗಿ ತಾತ್ಕಾಲಿಕ ಜೀವನಾಂಶ ವಿಷಯಕ್ಕೆ ಸಂಬಂಧಿಸಿದಂತೆ, ಜೀವನಾಂಶ ಕೊಡುವುದನ್ನು ಪತಿಯಾದವರು ಅಷ್ಟಾಗಿ ನಿರಾಕರಿಸುವುದಿಲ್ಲ. ಯಾಕೆಂದರೆ ನ್ಯಾಯಾಲಯದಲ್ಲಿ

ಇನ್ನೂ ಪ್ರಕರಣ ನಡೆಯುತ್ತಿರುವ ಕಾರಣಕ್ಕೆ. ಆದರೆ ಪ್ರಕರಣ ತೀರ್ಮಾನವಾಗಿ ಶಾಶ್ವತ ಜೀವನಾಂಶದ ಆದೇಶ ಹೊರಡಿಸಿದ ಬಳಿಕ ಸ್ವಲ್ಪ ದಿನಗಳ ಕಾಲ ಜೀವನಾಂಶವನ್ನು ನೀಡುತ್ತಾರಾದರೂ ನಂತರದ ದಿನಗಳಲ್ಲಿ ಅದನ್ನು ನೀಡುವುದನ್ನು ಮರೆಯುವುದುಂಟು. ಜೀವನಾಂಶವನ್ನು ಪ್ರತಿ ತಿಂಗಳಿಗೆ ಇಂತಿಷ್ಟು ಎಂತಾದರೂ ಅಥವಾ ಕೊಡಬೇಕಾದ ಜೀವನಾಂಶದ ಒಟ್ಟು ಮೊತ್ತವನ್ನು ನಿಗದಿ ಮಾಡಿ ಮೂರು ಅಥವಾ ನಾಲ್ಕು ಕಂತುಗಳಲ್ಲಿ ಅದನ್ನು ಕೊಡಲು ತೀರ್ಮಾನಿಸಲಾಗುತ್ತದೆ. ಹೀಗೆ ನಿರ್ಧಾರವಾಗುವ ಜೀವನಾಂಶದಲ್ಲಿ ಕೆಲವು ದಿನ ಕೊಟ್ಟು ನಂತರದಲ್ಲಿ ಕೊಡದೇ ವಂಚಿಸುವುದು ಕಂಡು ಬರುತ್ತದೆ. ಹೀಗೆ ವಂಚನೆಯಾದಂತಹ ಸಂದರ್ಭದಲ್ಲಿ ಜೀವನಾಂಶದಿಂದನೇ ಮಹಿಳೆಯರ ಜೀವನ ನಡೆಯುತ್ತಿದ್ದರೆ, ಜೀವನ ನಿರ್ವಹಣೆ ಕಷ್ಟವಾಗುತ್ತದೆ. ಇಂತಹ ಘಟನೆಗಳ ವಿರುದ್ಧ ನ್ಯಾಯಾಲಯದ ಮೊರೆಹೋಗಬಹುದಾದರೂ ಹೆಚ್ಚಿನ ಸಂಖ್ಯೆಯ ಮಹಿಳೆಯರು ಹೋಗದೇ ಇರುವುದು ಕಂಡು ಬರುತ್ತದೆ. ಯಾಕೆಂದರೆ ಪುನಃ ನ್ಯಾಯಾಲಯದ ಮೊರೆಹೋಗಬೇಕಾದರೆ ಹಣದ ಅವಶ್ಯಕತೆ ಬೇಕಾಗುತ್ತದೆ. ಆದರೆ ಜೀವನಾಂಶದಿಂದಲೇ ಜೀವನ ನಡೆಸುತ್ತಿರುವವರಿಗೆ ಇಂತಹ ಸಂದರ್ಭದಲ್ಲಿ ಹಣದ ತೊಂದರೆ ಕಂಡು ಬರುವುದು.

ಪತ್ನಿ ಮರುವಿವಾಹವಾದರೆ ಮಂಜೂರಾದ ಶಾಶ್ವತ ಜೀವನಾಂಶದ ಆದೇಶವನ್ನು ರದ್ದುಪಡಿಸಬಹುದಾಗಿದೆ. ಮಹಿಳೆಯರ ವಿಷಯದಲ್ಲಿ ವಿವಾಹ ಮುರಿದು ಬಿದ್ದ ನಂತರವೂ ಅವಳ ಲೈಂಗಿಕ ವರ್ತನೆ ಜೀವನಾಂಶ ಪಡೆಯುವುದನ್ನು ನಿರ್ಧರಿಸುತ್ತದೆ. ಇಲ್ಲಿ ಜೀವನಾಂಶ ಮಂಜೂರಾತಿಗೆ ಅವಳಿಗಿರುವ ಹಣದ ಅಗತ್ಯಕ್ಕಿಂತ ಅವಳ ನಡತೆ ಮುಖ್ಯವಾಗುತ್ತದೆ. ವಿವಾಹ ಊರ್ಜಿತವಿದ್ದಷ್ಟು ಕಾಲ, ಪತ್ನಿ ಆ ಮನೆಗಾಗಿ ಶ್ರಮಿಸಿದ್ದಳು ಎಂಬ ಅಂಶಕ್ಕಿಂತ ಅವಳು ಆರ್ಥಿಕವಾಗಿ ಪರಾವಲಂಬಿ ಎಂಬುದು ಈ ಕಾನೂನಿನಲ್ಲಿ ಅಂತರ್ಗತವಾಗಿರುವ ಅಂಶ.

ಕಾನೂನಿನ ಮೊರೆಹೋಗಿ ವಿಚ್ಛೇದನೆ ಪಡೆದು ಕಾನೂನುರೀತ್ಯಾ ಜೀವನಾಂಶವನ್ನು ಪಡೆಯುವ ಮಹಿಳೆಯರನ್ನೇ ಜೀವನಾಂಶದಿಂದ ವಂಚಿಸುವಂತಹ, ಪುರುಷ ಸಮಾಜದಲ್ಲಿ ಕಾನೂನಿನ ಮೊರೆಹೋಗದೆ ತಮ್ಮ ಸಮುದಾಯದ ಪ್ರಮುಖರೆದುರು ಅಥವಾ ಊರಿನ ಪ್ರಮುಖರೆದುರು ತಮ್ಮದೇ ಆದ ವಿಧಾನದ ಮೂಲಕ ವೈವಾಹಿಕ ಬಂಧನವನ್ನು ಮುರಿಯುವಂಥ ಸಂದರ್ಭದಲ್ಲಿ ತಮಗೆ ಸರಿಯೆನಿಸಿದ ರೀತಿಯಲ್ಲಿ ಜೀವನಾಂಶದ ಮೊತ್ತವನ್ನು ನಿರ್ಧರಿಸುತ್ತಾರೆ. ಇಲ್ಲಿ ತೀರ್ಮಾನವಾದಂತೆ ಪತ್ನಿಗೆ ಪತಿಯಾದವನು ಜೀವನಾಂಶವನ್ನು ಕೊಡಬೇಕಾಗುತ್ತದೆ. ತೀರ್ಮಾನವಾದ ದಿನವೇ ಜೀವನಾಂಶದ ಸಂಪೂರ್ಣ ಮೊತ್ತ ಕೊಟ್ಟಿದ್ದರೆ ಮಹಿಳೆಯರಿಗೆ ಜೀವನಾಂಶ ದೊರೆಯುತ್ತದೆ. ಆದರೆ ಜೀವನಾಂಶವನ್ನು ಕೊಡಲು ಕಾಲಾವಧಿ ಕೇಳಿದ್ದರೆ ಕೆಲವರು ಕೊಡುವುದುಂಟು. ಇನ್ನೂ ಕೆಲವರು ಕೊಡದೇ ವಂಚಿಸುತ್ತಾರೆ. ಅಲ್ಲದೇ ಈ ತೀರ್ಪುಗಳು ಊರಿನ ಪ್ರಮುಖರೆದುರೂ ಅಥವಾ ಸಮುದಾಯದ ಪ್ರಮುಖರೆದುರೂ ಪಂಚಾಯ್ತಿ ಮೂಲಕ ಇತ್ಯರ್ಥವಾಗುವುದರಿಂದ ಇವು ಪುರುಷರಿಗೆ ಹೆಚ್ಚು ಅನುಕೂಲವಾಗುವ ರೀತಿಯಲ್ಲಿಯೇ ಇರುತ್ತವೆ. ಯಾಕೆಂದರೆ ಪಂಚಾಯ್ತಿ ವ್ಯವಸ್ಥೆಯು ಪುರುಷಾಧಿಕಾರವನ್ನು ಸೂಚಿಸುತ್ತದೆ. ಇಲ್ಲಿ ಇತ್ಯರ್ಥ ಮಾಡುವಲ್ಲಿ ಪುರುಷರೇ ಕಂಡು ಬರುತ್ತಾರೆ. ಹಾಗಾಗಿ ಇಲ್ಲಿಯ ತೀರ್ಪುಗಳು ಮಹಿಳೆಯರಿಗೆ ಅನಾನುಕೂಲವಾಗಿರುತ್ತವೆ. ಈ

ಹೇಳಿಕೆಯನ್ನು ಸಮರ್ಥಿಸಲು ಈ ಕೆಳಗಿನ ಪ್ರಕರಣವನ್ನು ಗಮನಿಸಬಹುದು. ೨೬ ವರ್ಷದ ರತ್ನಾಳ ವಿವಾಹವು ಪರಶುರಾಮ ಎಂಬುವವರೊಂದಿಗೆ ನೆರವೇರಿದ್ದು, ಇವರುಗಳ ವೈವಾಹಿಕ ಜೀವನ ಉತ್ತಮ ವಾಗಿಲ್ಲದ ಕಾರಣ, ಜೀವನದ ಬಗ್ಗೆ ಜಿಗುಪ್ಸೆ ಹೊಂದಿದ ರತ್ನಾ ಸೀಮೆಎಣ್ಣೆಯನ್ನು ಮೈಮೇಲೆ ಸುರಿದು ಕೊಂಡು ಬೆಂಕಿ ಹಚ್ಚಿಕೊಂಡಿದ್ದರಿಂದ, ಇವಳು ಸಂಸಾರ ಜೀವನಕ್ಕೆ ನಾಲಾಯಕ್ಕು ಎಂದು ಭಾವಿಸಿ, ಮತ್ತೊಂದು ವಿವಾಹವಾಗಿ ಬಂದ ಗಂಡನ ವಿರುದ್ಧ ಪಂಚಾಯ್ತಿ ಸೇರಿಸಿದ ರತ್ನಾಳಿಗೆ ದೊರೆತ ತೀರ್ಪು ಹೇಗಿತ್ತೆಂದರೆ, ರತ್ನಾಳ ಗಂಡ ಮರುಮದುವೆಯಾಗಿ ಬಂದದ್ದನ್ನು ಮನ್ನಿಸಿದ ತೀರ್ಪುಗಾರರು ಅವಳಿಗೆ ಜೀವನಾಂಶವೆಂದು ನಿರ್ಧರಿಸಿದ ಹಣದ ಮೊತ್ತವೆಂದರೆ ೩೦,೦೦೦/- ಸಾವಿರ ರೂಪಾಯಿಗಳು. ರತ್ನಾಳ ಗಂಡ ಖಾಸಗಿ ಕಾರ್ಖಾನೆಯೊಂದರಲ್ಲಿ ದಿನಗೂಲಿ ನೌಕರ ತಿಂಗಳಿಗೆ ೪,೦೦೦/- ಸಾವಿರ ಸಂಬಳ ಬರುತ್ತದೆ. ಆದರೂ ಅವನ ಸಂಬಳದಲ್ಲಿ ಪ್ರತಿ ತಿಂಗಳು ಇಂತಿಷ್ಟು ಎಂದು ತೀರ್ಮಾನಿಸಿರಲಿಲ್ಲ ಅಥವಾ ಅವನು ಜೀವಿತಾವಧಿಯಲ್ಲಿ ಸಂಪಾದಿಸಬಹುದಾದಂತಹ ಹಣದ ಮೊತ್ತವನ್ನು ಪರಿಗಣಿಸಿ ಜೀವನಾಂಶವನ್ನು ನಿರ್ಧರಿಸಲಿಲ್ಲ. ಈ ಬಗೆಯ ತೀರ್ಪು ಪುರುಷರ ಪರವಾಗಿ ಮಹಿಳೆಯರಿಗೆ ಪ್ರತಿಕೂಲವಾಗಿರುವುದನ್ನೇ ಸೂಚಿಸುತ್ತದೆ. ಈ ಬಗೆಯ ತೀರ್ಪುಗಳು ಕೇವಲ ರತ್ನಾಳದೊಂದೇ ಅಲ್ಲ. ಪಂಚಾಯ್ತಿ ಮೂಲಕ ವಿವಾಹ ಬಂಧನದಿಂದ ಹೊರಬರುವಂತಹವರೆಲ್ಲರದ್ದು ಸಾಮಾನ್ಯವಾಗಿ ಈ ಬಗೆಯಲ್ಲಿಯೇ ಕಂಡು ಬರುತ್ತದೆ.

ಉಲ್ಲೇಖ

೧. **ಮೌಳಿ ಎಚ್.ವಿ., ೧೯೮೯, ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು (ಆರು ಉಪನ್ಯಾಸಗಳು), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.**

• • •

# ಅಧ್ಯಾಯ ೮

## ಅಧ್ಯಯನದಿಂದ ಕಂಡುಕೊಂಡದ್ದು

ವಿಚ್ಛೇದನೆಯು ವಿವಾಹಿತ ಮಹಿಳೆಯರಿಗೆ ವಿವಾಹ ಸಂಸ್ಥೆ ಮತ್ತು ಅದರ ಗಂಡನೆಂಬ ವ್ಯಕ್ತಿ ಸೃಷ್ಟಿಸುವ ಸಮಸ್ಯೆಗಳಿಂದ ಹೊರಬರಲು ದಾರಿ ಆಗಿದೆ. ಜೊತೆಗೆ ಇದು ಮಹಿಳೆಯರಿಗೆ ಪರ್ಯಾಯ ಜೀವನ ರೂಪಿಸಿಕೊಳ್ಳುವ ಅವಕಾಶ ಕಲ್ಪಿಸಿದೆ. ಈ ಮೂಲಕ ಮಹಿಳೆಯ ವಿವಾಹ ಸಮಸ್ಯೆಗಳಿಗೆ ಪರಿಹಾರ ಒದಗಿಸಿದೆ ಎಂಬುದು ಸ್ಪಷ್ಟ. ವಿಚ್ಛೇದನೆಯು ಕಾಲ, ದೇಶ, ಸಮಾಜಕ್ಕೆ ತಕ್ಕಂತೆ ಭಿನ್ನ ಸ್ವರೂಪ ಪಡೆದಿದೆ. ಇದು ವಿವಾಹದಷ್ಟೇ ಪ್ರಾಚೀನತೆಯನ್ನು ಹೊಂದಿದೆ. ಪ್ರಾಚೀನ ಕಾಲದಲ್ಲಿ ವಿಚ್ಛೇದನೆ ಮತ್ತು ಅದರ ಸ್ವರೂಪ, ಕಾರಣಗಳು ತುಂಬಾ ಸೀಮಿತವಾಗಿದ್ದವು. ಅಷ್ಟೇ ಅಲ್ಲ, ಪುರುಷರ ಆಸೆ-ಆಕಾಂಕ್ಷೆ ಅಸ್ತಿತ್ವವನ್ನೇ ರಕ್ಷಿಸುತ್ತಿದ್ದವು ಎಂಬುದಕ್ಕೆ ಹಲವು ನಿದರ್ಶನಗಳಿವೆ. ಉದಾಹರಣೆ ಮಹಿಳೆಯರು ತನ್ನ ಗಂಡ ದೇಶಾಂತರ ಹೋದ್ರೆ ವಿಚ್ಛೇದನೆ ಪಡೆಯಬಹುದು. ಅದೇ ರೀತಿಯಾಗಿ ಪುರುಷರು ಸಹ ತನ್ನ ಹೆಂಡತಿಗೆ ಗಂಡು ಮಕ್ಕಳು ಆಗದಿದ್ದಾಗ ವಿಚ್ಛೇದನೆ ಪಡೆಯಬಹುದಿತ್ತು. ಆದರೆ ಆಧುನಿಕತೆಯು ವಿಚ್ಛೇದನ ಸ್ವರೂಪವನ್ನೇ ಬದಲಾಯಿಸಿತು. ಜೊತೆಗೆ ಮಹಿಳೆಯರಿಗೆ ವಿಚ್ಛೇದನೆ ಒಂದು ಹಕ್ಕು ಆಗಬೇಕು ಎಂಬ ತಿಳುವಳಿಕೆ ನೀಡಿತು. ಈ ಹಿನ್ನೆಲೆಯಿಂದ ಎಂಬತ್ತರ ದಶಕದ ಚಳುವಳಿಗಳು ವಿಚ್ಛೇದನೆಯನ್ನು ಒಂದು ಮಹಿಳಾ ವಿಷಯವಾಗಿ ಪರಿಗಣಿಸಿದವು (ನಾಗೇಶ್ ಎಚ್.ವಿ., ೧೯೯೯, ಪು. ೪೫-೪೮). ಆಧುನಿಕ ತಿಳುವಳಿಕೆ ಪಡೆದ ವಿವಾಹಿತ ಮಹಿಳೆಯರಲ್ಲಿ ಕೆಲವರು ಪುರುಷನಿಷ್ಠ ಮೌಲ್ಯಗಳ ಪಾಲನೆಗೆ ಒತ್ತಾಯಿಸುವ ಗಂಡನೆಂಬ ವ್ಯಕ್ತಿಯನ್ನು ವಿರೋಧಿಸಿದರೆ ಇನ್ನೂ ಕೆಲವು ಮಹಿಳೆಯರು ಪುರುಷನಿಷ್ಠ ಮೌಲ್ಯಗಳನ್ನು ಜಾರಿಗೊಳಿಸುವ ವಿವಾಹ ಸಂಸ್ಥೆ ಮತ್ತು ಅದರ ಸದಸ್ಯರನ್ನು ನಿರಾಕರಿಸಿ ಹೊರ ಬರುತ್ತಿದ್ದಾರೆ. ಹಾಗಾಗಿ ಗಂಡನೆಂಬ ವ್ಯಕ್ತಿಯಿಂದ, ವಿವಾಹ ಸಂಸ್ಥೆಯಿಂದ ಬಿಡುಗಡೆ ನೀಡಿದ ಕಾರಣಗಳನ್ನು ಪ್ರಕರಣಗಳೇ ಸ್ಪಷ್ಟಪಡಿಸುತ್ತವೆ. ಪ್ರಕರಣ ಒಂದು, ಪ್ರಕರಣ ಐದು, ಪ್ರಕರಣ ಆರರಲ್ಲಿ ಮಹಿಳೆಯರು ಗಂಡ ಮತ್ತು ಆತನ ಮನೆಯ ಇತರ ಸದಸ್ಯರ ಲೈಂಗಿಕ ಕಿರುಕುಳಗಳು ವಿಚ್ಛೇದನೆಗೆ ಮುಖ್ಯ ಸಂಗತಿಗಳಾಗಿವೆ.

ಪ್ರಕರಣ ಒಂದು, ಪ್ರಕರಣ ಮೂರು, ಪ್ರಕರಣ ಐದರಲ್ಲಿ, ಗಂಡನು ಲೈಂಗಿಕನಿಷ್ಠೆಯನ್ನು ಅನುಮಾನಿಸುವುದು. ಮಹಿಳೆಯರ ವಿಚ್ಛೇದನಗೆ ಬಹಳ ಮುಖ್ಯವಾದ ಕಾರಣವಾಗಿದೆ. ಪ್ರಕರಣ ಒಂದು,

ಪ್ರಕರಣ ಎರಡು, ಪ್ರಕರಣ ಆರರಲ್ಲಿ ವರದಕ್ಷಿಣೆಯೇ ಮಹಿಳೆಯರ ವಿಚ್ಛೇದನೆಗೆ ಕಾರಣವಾಗಿದೆ. ಇನ್ನೂ ಪ್ರಕರಣ ನಾಲ್ಕು, ಪ್ರಕರಣ ಏಳರಲ್ಲಿ ಮಾನಸಿಕ ಹಿಂಸೆಗಳಿಂದ ಮಹಿಳೆಯರು ವಿಚ್ಛೇದನ ಪಡೆದಿದ್ದಾರೆ. ಒಟ್ಟಿನಲ್ಲಿ ಮಹಿಳೆಯರು ಗಂಡ ಮತ್ತು ಅವರ ಕುಟುಂಬದ ಆಸೆ-ಆಕಾಂಕ್ಷೆ, ಅಭಿರುಚಿಗಳಿಗೆ ಹೊಂದಾಣಿಕೆ ಆಗದೇ ಮತ್ತು ತಮ್ಮ ಗುಡುಂದಿರಿಂದ ತಮ್ಮ ಕೆಲಸಗಳಿಗೆ ತೊಂದರೆ ಆದಕಾರಣಕ್ಕಾಗಿ ಮಹಿಳೆಯರು ವಿಚ್ಛೇದನೆ ಪಡೆದಿದ್ದಾರೆ. ಹಲವು ಕಾರಣಗಳಿಂದ ಗಂಡ ಮತ್ತು ವಿವಾಹ ಸಂಸ್ಥೆಯಿಂದ ವಿಚ್ಛೆದನೆ ಪಡೆಯಲು ಇಚ್ಛಿಸುವ ಮಹಿಳೆಯರಿಗೆ ಕಾನೂನುಗಳು ತನ್ನದೇ ಆದ ಬೆಂಬಲವನ್ನು ನೀಡಿವೆ. "ಹಿಂದೂ ವಿವಾಹ ಕಾಯ್ದೆ-೧೯೫೫-೫೬" ರ ಪ್ರಕಾರ ಸೆಕ್ಷನ್ ೧೩, ಸೆಕ್ಷನ್ ೧೩/ಬಿಗಳು ಮಹಿಳೆಯರಿಗೆ ಗಂಡನೆಂಬ ವ್ಯಕ್ತಿಯಿಂದ ವಿವಾಹ ಸಂಸ್ಥೆಯಿಂದ ದೈಹಿಕ ಮತ್ತು ಮಾನಸಿಕ ಹಿಂಸೆ ಅಥವಾ ಈ ಸಂಗತಿಗಳು ಅವರ ವ್ಯಕ್ತಿತ್ವ ರೂಪಿಕೆಗೆ ಅಡ್ಡಿಯನ್ನುಂಟು ಮಾಡಿದರೆ ಈ ಸೆಕ್ಷನ್‌ಗಳು ಮಹಿಳೆಯರಿಗೆ ವಿಚ್ಛೇದನೆ ಪಡೆಯಲು ಸಹಕರಿಸುತ್ತವೆ. ಸೆಕ್ಷನ್ ೨೪, ಸೆಕ್ಷನ್ ೨೫ಗಳು ವಿಚ್ಛೇದನೆ ಪಡೆದ ಮಹಿಳೆಯರ ಬದುಕಿಗೆ ರಕ್ಷಣೆ ನೀಡುತ್ತಿವೆ. ಅಂದರೆ ಗಂಡನ ಸ್ಥಿರ ಚರಾಸ್ಥಿಯಲ್ಲಿ ಕೆಲವು ಭಾಗವನ್ನು ಆ ಮಹಿಳೆಯರಿಗೆ ತಾತ್ಕಾಲಿಕ, ಶಾಶ್ವತ ಜೀವನಾಂಶ ನೀಡಬೇಕೆಂದು ಸೂಚಿಸುತ್ತದೆ. ಸೆಕ್ಷನ್ ೨೬ ವಿಚ್ಛೇದನೆ ಪಡೆದಿರುವ ಮಹಿಳೆಯರಿಗೆ ಮಕ್ಕಳಿದ್ದು, ಆ ಮಗುವಿನ ಜವಾಬ್ದಾರಿಯನ್ನು ಯಾರೂ ನಿರ್ವಹಿಸಬೇಕೆಂದು ಹೇಳುತ್ತದೆ.

ವಿಚ್ಛೇದನೆ ಪಡೆಯುತ್ತಿರುವ ಮಹಿಳೆಯರಿಗೆ ಕಾನೂನಿನ ಬೆಂಬಲ ಒಂದು ಕಡೆ, ಮತ್ತೊಂದು ಕಡೆ ಆ ಮಹಿಳೆಯರ ಅಪೇಕ್ಷೆಗಳು ಅವರ ಬದುಕಿನ ದಾರಿಗಳಾಗಿವೆ. ಅಂದರೆ ತವರು ಮನೆ, ಗಂಡನ ಮನೆ ಮಕ್ಕಳು ಎಂದು ಬದುಕುತ್ತಿರುವ ಮಹಿಳೆಗೆ ವಿಚ್ಛೇದನೆ ಗಂಡನ ವಾಸಸ್ಥಾನವನ್ನು ನಿರಾಕರಿಸುತ್ತದೆ. ಇದು ಆ ಮಹಿಳೆಯರ ಬದುಕಿಗೆ ಅತಂತ್ರತೆಯನ್ನು ತಂದು ಒಡ್ಡುತ್ತದೆ. ಇಂತಹ ಅತಂತ್ರತೆಯ ನಡುವೆಯೂ ಅವರು ವ್ಯಕ್ತಪಡಿಸುವ ಅಪೇಕ್ಷೆಗಳು ಅವರಲ್ಲಿರುವ ಸಾಮರ್ಥ್ಯ ಮತ್ತು ಸಾಮಾಜಿಕ ಅವಕಾಶಗಳನ್ನು ಸೂಚಿಸುತ್ತದೆ. ಇವುಗಳು ಅತಂತ್ರ ಮಹಿಳೆಯರ ಬಾಳಿನಲ್ಲಿ ನೆಮ್ಮದಿಯನ್ನೇ ಕೊಡುತ್ತಿವೆ. ಹೀಗೆ ಲಭ್ಯವಾದ ಅವಕಾಶಗಳಿಂದಾಗಿ ವ್ಯಕ್ತಿಯಿಂದ ವಿಚ್ಛೇದನೆ ಪಡೆದ ಮಹಿಳೆಯರು ಮರುವಿವಾಹದ ಬಗ್ಗೆ ಸಕಾರಾತ್ಮಕ ಅಭಿಪ್ರಾಯ ವ್ಯಕ್ತಪಡಿಸಿ, ಈ ಮೂಲಕ ತಮ್ಮ ಬದುಕನ್ನು ರೂಪಿಸಿಕೊಳ್ಳುವ ಹಂಬಲ ವ್ಯಕ್ತಪಡಿಸುತ್ತಿದ್ದಾರೆ. ವಿವಾಹ ಸಂಸ್ಥೆ ಬಗೆಗೆ ತಕರಾರು ಇರುವವರು ಮತ್ತು ಈ ಸಂಸ್ಥೆಯನ್ನು ನಿರಾಕರಿಸುವ ಮಹಿಳೆಯರು ತಮ್ಮಗಿರುವ ಸಾಮರ್ಥ್ಯಕ್ಕನುಗುಣವಾಗಿ ತಮಗೆ ಸಮಾಜದಲ್ಲಿ ಲಭ್ಯವಾಗಿರುವ ಅವಕಾಶಗಳಲ್ಲಿ ತಮ್ಮ ಜೀವನ ರೂಪಿಸಿಕೊಳ್ಳುವ ಆಶಯ ವ್ಯಕ್ತಪಡಿಸಿದ್ದಾರೆ ಎಂದು ಹೇಳಬಹುದು. ಅಂದರೆ ಮಹಿಳೆಯರು ತಮಗೆ ದಕ್ಕಿದ ಶಿಕ್ಷಣಕ್ಕೆ ಅನುಗುಣವಾಗಿ ದೊರೆತ ಉದ್ಯೋಗದಲ್ಲಿ, ತಾವು ಪ್ರಾವೀಣ್ಯತೆಯನ್ನು ಸಾಧಿಸುವ ಮೂಲಕ ತಮ್ಮ ಬದುಕನ್ನು ತಾವೇ ಅರ್ಥಪೂರ್ಣಗೊಳಿಸಿಕೊಳ್ಳಲು ಸಿದ್ಧರಿದ್ದಾರೆ. ಈ ಹಿನ್ನೆಲೆಯಿಂದ ಮಹಿಳೆಯರು ವಿಚ್ಛೇದನೆ ಪಡೆಯುತ್ತಿದ್ದಾರೆ.

ವಿಚ್ಛೇದನೆ ಪಡೆದ ಮಹಿಳೆಯರಲ್ಲಿ ಮುಂದಿನ ಬದುಕಿನ ಬಗೆಗೆ ಸಕರಾತ್ಮಕ, ನಕರಾತ್ಮಕ ಪ್ರತಿಕ್ರಿಯೆಗಳಿವೆ. ಆದರೂ ವಿಚ್ಛೇದನೆ ಮಹಿಳೆಯರ ಆತ್ಮಬಲ ಹೆಚ್ಚಿಸುವಂಥದ್ದಾಗಿದೆ. ಈ ಮಹಿಳೆಯರು

ಸಾಮಾಜಿಕ ನಿಂದನೆ, ವಾಸಸ್ಥಳ ಸಮಸ್ಯೆ, ಭದ್ರತೆ ಇಲ್ಲದಿರುವ ಇತ್ಯಾದಿ ನೇತಾತ್ಮಕ ಸಂಗತಿಗಳ ಮಧ್ಯೆಯು ತಮ್ಮ ಸ್ವತಂತ್ರದ ಸ್ವಾವಲಂಬನೆ ಬದುಕು ಸಾಗಿಸುತ್ತಿದ್ದಾರೆ. ಇದು ಮಹಿಳೆಯರಲ್ಲಿ ನಾವು ಯಾರ ಹಂಗು ಇಲ್ಲದೆ ಬದುಕಬಲ್ಲವೆಂಬ ಮನೋಸ್ಥೈರ್ಯ ಮೂಡಿಸಿದೆ. ಇವುಗಳು ಈ ಮಹಿಳೆಯರು ತಮಗೆ ಧಕ್ಕಿದ ಸಮಾಜಿಕತೆಯಿಂದ ಎಲ್ಲ ವಲಯಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಮೂಲಕ ತಮ್ಮದೇ ಆದ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದಾರೆ. ಇದು ಅವರಿಗೆ ಅವರದೇ ಆದ ಅಸ್ತಿತ್ವ ಇದೆ ಎಂಬುದನ್ನು ಸೂಚಿಸುತ್ತದೆ.

ಒಟ್ಟಿನಲ್ಲಿ ವಿಚ್ಛೇದನೆ ಎನ್ನುವಂಥದ್ದು ಮಹಿಳಾ ಸಮುದಾಯಕ್ಕೆ ವಿವಾಹ ಸಂಸ್ಥೆ ಸೃಷ್ಟಿಸುವ ಸಮಸ್ಯೆಗಳಿಗೆ ಪರಿಹಾರವಾಗಿದೆ. ಅಂದರೆ ಗಂಡನಿಂದ ವಿವಾಹ ಸಂಸ್ಥೆಯಿಂದ ಸಮಸ್ಯೆ ಅನುಭವಿಸುವ ಮಹಿಳೆಯರಿಗೆ ಇದು ನೆರವಾಗಲಿದ್ದು, ಈ ಮಹಿಳೆಯರ ವಿಚ್ಛೇದನೆಗೆ ಪುರುಷನಿಷ್ಠ ಮೌಲ್ಯಗಳೇ ಕಾರಣವಾಗಿರುವುದ ಸ್ಪಷ್ಟ. ಈ ಹಿನ್ನೆಲೆಯಿಂದ ವಿಚ್ಛೇದನೆ ಪಡೆದಿರುವ ಮಹಿಳೆಯರ ಅಪೇಕ್ಷೆಗಳು ಅವರ ಅಸ್ತಿತ್ವದ ರಕ್ಷಣೆಯ ನೆಲೆಯನ್ನು ಹೊಂದಿವೆ. ವಿಚ್ಛೇದನೆ ನಂತರ ಮಹಿಳೆಯ ಬದುಕಿನ ಬಗೆಗಿರುವ ನೇತ್ಯಾತ್ಮಕ ಸಂಗತಿಗಳು ಪುರುಷಪ್ರಧಾನ ಸಮಾಜವೇ ಸೃಷ್ಟಿಸಿರುವಂಥದ್ದು. ಹಾಗಾಗಿ ವಿವಾಹ ಸಂಸ್ಥೆ ಮತ್ತು ಗಂಡನಿಂದ ಸಮಸ್ಯೆ ಅನುಭವಿಸುವ ಮಹಿಳೆಯರು ತಮಗೆ ಲಭ್ಯವಿರುವ ಸಾಮಾಜಿಕ ಸಂದರ್ಭ ಮತ್ತು ಸಂಗತಿಗಳನ್ನು ಆಧರಿಸಿ ತಮ್ಮ ವ್ಯಕ್ತಿತ್ವ ರೂಪಿಸಲು ಸಹಕಾರಿ ಆಗುವ ತಮ್ಮ ಅಸ್ತಿತ್ವ ಕಾಪಾಡಿಕೊಳ್ಳುವಂಥ ನಿರ್ಧಾರ ತೆಗೆದುಕೊಳ್ಳಬೇಕಾಗಿದೆ ಎಂದು ಹೇಳಬಹುದು.

• • •

# ಪರಾಮರ್ಶನ ಗ್ರಂಥಗಳು


೧. ಇಂದಿರಾ ಆರ್., ೨೦೦೨, ಮಹಿಳಾ ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೨. ಉಷಾ ಎಂ., ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೩. ಗಂಗಾಧರ ಎಚ್., ೧೯೭೨, ಹಿಂದೂ ವಿವಾಹ ಶಾಸನ, ಮಾನಸ ಗಂಗೋತ್ರಿ, ಮೈಸೂರು.

೪. ಗಾಯಿತ್ರಿ ಎನ್., ೧೯೯೧, ಮಹಿಳೆ ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

೫. ಗೀತಾಕೃಷ್ಣಮೂರ್ತಿ, ೨೦೦೭, ಮಹಿಳೆ ಸಮಾಜ, ಕಾನೂನು, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

೬. ಗೋಪಾಲರಾವ್ ವೈ.ಎಲ್., ೨೦೦೦, ಭಾರತೀಯ ನಾರಿ ಅಂದು-ಇಂದು, ಭೈರವ ಪಬ್ಲಿಕೇಷನ್ಸ್, ಚಿಕ್ಕಮಗಳೂರು.

೭. ಚಂದ್ರಶೇಖರ್ ಸಿ.ಆರ್., ೨೦೦೪, ನೀವು ಯಶಸ್ವಿ ಗೃಹಿಣಿಯೆ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

೮. ಛಾಯಾಧಾತರ (ಮೂಲ), ಸರಸ್ವತಿ ರಿಸಬುಡ (ಅನು), ೧೯೯೨, ಸ್ತ್ರೀ-ಪುರುಷ, ಇಳಾ ಪ್ರಕಾಶನ, ಬೆಂಗಳೂರು.

೯. ನಡಗೇರಿ ಎಸ್.ಆರ್., ೨೦೦೫, ಕಾನೂನು ಮತ್ತು ಮಹಿಳೆ, ಶ್ರೀರಾಜಗುರು ಪ್ರಕಾಶ, ಬೆಂಗಳೂರು

೧೦. ನಾಗೇಶ್ ಎಚ್.ವಿ., ೧೯೯೯, ಸಮಾಜಿಕ ಚಳುವಳಿಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೧. ನಾರಾಯಣ ಎಂ., ೨೦೦೪, ಸಾಮಾಜಿಕ ಸಂಸ್ಥೆಗಳು ಮತ್ತು ಸಾಮಾಜಿಕ ಬದಲಾವಣೆ, ಲಕ್ಷ್ಮಿ ಪ್ರಿಂಟರ್ಸ್ ಮತ್ತು ಪಬ್ಲಿಕೇಷನ್ಸ್, ಮೈಸೂರು.

೧೨. ನಿರೂಪಮ, ೧೯೯೬, ಧರ್ಮಶಾಸ್ತ್ರಗಳು ಸ್ತ್ರೀ ಹಾಗೂ ಶೋಷಣೆ, ಆರತಿ ಪಬ್ಲಿಕೇಷನ್ಸ್, ಮೈಸೂರು.

೧೩. ನಿರೂಪಮ, ೨೦೦೨, ಮಹಿಳೆ ಮತ್ತು ವಿವಾಹ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೧೪. ನೀಲಮ್ಮ ಕತ್ನಳ್ಳಿ, ೧೯೯೭, ಮಹಿಳೆ ಹಲವು ಮುಖಗಳು, ಶ್ರೀ ರೇಣುಕಾ ಪ್ರಕಾಶನ, ಗುಲಬರ್ಗಾ.

೧೫. ನೇಮಿಚಂದ್ರ, ೨೦೦೧, ಮಹಿಳಾ ಅಧ್ಯಯನ, ಅಂಕಿತ ಪ್ರಕಾಶನ, ಬೆಂಗಳೂರು.

೧೬. ಪ್ರಭು ಕೆ.ಎಚ್., ೧೯೮೮, ಮದುವೆ ಕಾನೂನು, ಪಿ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೭. ಪ್ರಭು ಕೆ.ಎಚ್., ಹಿಂದೂ ಕಾನೂನು, ಆಕಳವಾಡಿ ಬುಕ್ ಡಿಪೋ, ಪ್ರಕಾಶನ ಮತ್ತು ವಿತರಕರು, ಧಾರವಾಡ.

೧೮. ಪ್ರೀತಿ ಶುಭಚಂದ್ರ, ೨೦೦೨, ಮಹಿಳಾ ಅಧ್ಯಯನ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೯. ಪೂರ್ವಚಾರ, ೨೦೦೦, ಭಾರತೀಯ ಸಮಾಜ ಮತ್ತು ಸಂಸ್ಕೃತಿ, ವಿಶ್ವಕರ್ಮ ಪ್ರಕಾಶನ, ಶಿವಮೊಗ್ಗ.

೨೦. ಪ್ರೇಮಾ ಸಿರ್ಸೆ. ೨೦೦೬, ಮಹಿಳೆ ಸಮಾಜ ಮತ್ತು ಸವಾಲುಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೨೧. ಮಂಗಳಾ ಚ.ನ., ೧೯೯೦, ಎಚ್ಚೆತ್ತ ಹಾದಿಯಲ್ಲಿ ಮಹಿಳೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೨. ಮುಳಗುಂದ, ಚ.ವಿ., ೧೯೮೬, ಆಧುನಿಕ ಮಹಿಳೆ ಮತ್ತು ಸಮಾಜ, ಮಾತಾಶ್ರೀ ಪ್ರಕಾಶನ, ಮುದ್ದೇಬಿಹಾಳ.

೨೩. ಮೂರ್ತೇಶ್ವರಯ್ಯ, ಬೆ.ಕಾ., ೨೦೦೩, ಸಮಾಜ ಮತ್ತು ಕಾನೂನು, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೨೪. ಮೌಳಿ ಎಚ್.ವಿ., ೧೯೮೯, ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು (ಆರು ಉಪನ್ಯಾಸಗಳು), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೫. ಮೂರ್ತೇಶ್ವರಯ್ಯ, ಬೆ.ಕಾ., ೨೦೦೭ ಮಹಿಳಾ ಸಾಮಾಜಿಕತೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೨೬. ಯಂಡಮೂರಿ ವಿರೇಂದ್ರನಾಥ, ೨೦೦೫, ಓ ಹೆಣ್ಣೆ ನೀನೆಷ್ಟು ಒಳ್ಳೆಯವಳು, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ.

೨೭. ಶರ್ಮಕುಮಾರಿ, ೨೦೦೦, ಕನಿಸಿನಾಳದ ಕಣ್ಣು, ತನುಮನ ಪ್ರಕಾಶನ, ಮೈಸೂರು.

೨೮. ರಾಜಶೇಖರ್ ಎನ್., ೨೦೦೧, ಭಾರತೀಯ ಸಮಾಜ, ಭ್ರಮರ ಪ್ರಕಾಶನ, ಶಿವಮೊಗ್ಗ.

೨೯. ರೋಹಿಣಿ ಬಿ.ಎಂ., ೧೯೯೫, ಸ್ತ್ರೀ-ಸಂವೇದನೆ, ಹೇಮಾಂಶು ಪ್ರಕಾಶನ, ಮಂಗಳೂರು.

೩೦. ರೋಹಿಣಿ ಬಿ.ಎಂ., ೨೦೦೪-೦೫, ಸ್ತ್ರೀ ಭಿನ್ನ ಮುಖಗಳು, ಕರಾವಳಿ ಲೇಖಕಿಯರ-ವಾಚಕಿಯರ ಸಂಘ(ರಿ), ಮಂಗಳೂರು.

೩೧. ವಿಜಯ ಸಬರದ, ೨೦೦೫, ಮಹಿಳೆ ಶೋಷಣೆ ಸವಾಲುಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೩೨. ವಿಜಯಾ ದಬ್ಬೆ, ೧೯೮೯, ಮಹಿಳೆ ಸಾಹಿತ್ಯ ಸಮಾಜ, ರಚನಾ ಪ್ರಕಾಶನ, ಮೈಸೂರು.

೩೩. ವಿಜಯಾ, ೨೦೦೫, ನಿಜ ಧ್ಯಾನ, ಪ್ರೆಸ್ ಕ್ಲಬ್ ಪ್ರಕಾಶನ, ಬೆಂಗಳೂರು.

೩೪. ವಿಜಯಾ ದಬ್ಬೆ, ೧೯೯೭, ನಾರಿ-ದಾರಿ, ದಿಗಂತ ಶ್ರೀಶಕ್ತಿ ಎಲೆಕ್ಟ್ರಿ ಪ್ರೆಸ್, ಮೈಸೂರು.

೩೫. ವಿಶ್ವನಾಥ ಡಿ.ಎಸ್., ೨೦೦೫, ವಿವಾಹ V/s ವಿಚ್ಛೇದನೆ (ಶಾಶ್ವತ ವಿವಾಹವೋ-ವಿಚ್ಛೇದನವೊ), ಶ್ರೀ ಗಣೇಶ್ ಪಬ್ಲಿಕೇಷನ್ಸ್, ಬೆಂಗಳೂರು.

೩೬. ವಿಶ್ವನಾಥ ಡಿ.ಎಸ್., ೨೦೦೬, ಬದುಕಿನ ಧರ್ಮ-ಮಹಿಳೆ, ಶ್ರೀ ಗಣೇಶ್ ಪಬ್ಲಿಕೇಷನ್ಸ್, ಬೆಂಗಳೂರು.

೩೭. ವೆಂಕೋಬರಾವ್, ೨೦೦೨, ನ್ಯಾಯಕ್ಕಾಗಿ ಮಹಿಳೆಯರ ಹೋರಾಟ.

೩೮. ಶಂಕರ ಖಂಡೇರಿ, ೧೯೯೯, ನೀವು ಮತ್ತು ಕಾನೂನು : ವಿವಾಹ ವಿಚ್ಛೇದನೆ, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು.

೩೯. ಶೇಷ ನವರತ್ನ, ೨೦೦೫, ಮನುಸ್ಮೃತಿ, ಸಮಾಜ ಪುಸ್ತಕಾಲಯ, ಧಾರವಾಡ.

೪೦. ಶೈಲಜ ಹಿರೇಮಠ, ೧೯೯೯, ಪಾತರದವರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೪೧. ಶೈಲಜ ಹಿರೇಮಠ, ೨೦೦೬, ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೪೨. ಶ್ರೀಮತಿ ಎಚ್.ಎಸ್., ೨೦೦೧, ಮಹಿಳಾ ಅಧ್ಯಯನ ಸಂಚಿಕೆ (ಉತ್ತರಾಯನ ಸಂಚಿಕೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೪೩. ಶ್ರೀಮತಿ ಎಚ್.ಎಸ್., ೧೯೯೯, ಮಹಿಳಾ ಅಧ್ಯಯನ ಸಂಚಿಕೆ (ದಕ್ಷಿಣಾಯನ ಸಂಚಿಕೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೪೪. ಶ್ರೀಮತಿ ಎಚ್.ಎಸ್., ೨೦೦೦, ಮಹಿಳಾ ಅಧ್ಯಯನ ಸಂಚಿಕೆ (ದಕ್ಷಿಣಾಯನ ಸಂಚಿಕೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೪೫. ಶ್ರೀಮತಿ ಎಚ್.ಎಸ್., ೨೦೦೧, ಮಹಿಳಾ ಅಧ್ಯಯನ ಸಂಚಿಕೆ (ದಕ್ಷಿಣಾಯನ ಸಂಚಿಕೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೪೬. ಶ್ರೀಮತಿ ಎಚ್.ಎಸ್., ೨೦೦೩, ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೪೭. ಶ್ರೀಮತಿ ಎಚ್.ಎಸ್., ಗೌರಿ-ದುಃಖ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಕೇಷನ್ಸ್, ಬೆಂಗಳೂರು.

೪೮. ಶ್ರೀಮತಿ ಎಚ್.ಎಸ್., (ಅನು), ಸಿಮೋನ್ ದ ಬೊವ್ (ಮೂಲ), ೨೦೦೭, ದ ಸೆಕೆಂಡ್ ಸೆಕ್ಸ್, ಅಧ್ಯಯನ ಮಂಡಲ, ಬೆಂಗಳೂರು.

೪೯. ಸುಜಾತ, ಎಸ್.ಜಿ., ೨೦೦೫, ಮನದಾಳದ ಮಾತುಗಳು, ಪಂಚಜನ್ಯ ಪಬ್ಲಿಕೇಷನ್ಸ್, ಬೆಂಗಳೂರು.

೫೦. ಸಮತಾ ಬಿ. ದೇಶಮಾನೆ, ೨೦೦೩, ಸಮಾಜಶಾಸ್ತ್ರ ಮತ್ತು ಮಹಿಳೆ, ಲಕ್ಷ್ಮಿ ಪ್ರಿಂಟರ್ಸ್ ಅಂಡ್ ಪಬ್ಲಿಕೇಷನ್ಸ್ ಹೌಸ್, ಮೈಸೂರು.

೫೧. ಸೂರ್ಯಕಾಂತ ಎಸ್. ಸೊನ್ನದ, ೨೦೦೪, ಮಹಿಳೆ ಏಕೆ ಸಬಲಳಲ್ಲ?, ಶ್ರೀ ಶಿವಯೋಗಿ ಪ್ರಭು ಮಠ, ಜೇವರ್ಗಿ.

೫೨. ಹೇಮಲತಾ ಮಹಿಷಿ, ೨೦೦೪, ಸಬಲೆ-ಸಲಹೆ, ಸಾಧನ ಪ್ರಕಾಶನ, ಬೆಂಗಳೂರು.

೫೩. ಹೇಮಲತಾ ಮಹಿಷಿ, ೧೯೯೫, ಮಹಿಳೆ ಮತ್ತು ಕಾನೂನು, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು.

**ನಿಯತಕಾಲಿಕೆಗಳು**

೧. ಚಂದ್ರಶೇಖರ್ ಸಿ.ಆರ್., ೨೦೦೫, ದಾಂಪತ್ಯ ವಿರಸಕ್ಕೆ ಕಾರಣ-ಪರಿಹಾರ, ಹೊಸತು.

೨. ವತ್ಸಲ ಕೆ., ೨೦೦೧, ಮಹಿಳೆಯರ ಮೇಲೆ ನಡೆಯುವ ಹಿಂಸೆ, ಮಾನಸ.

೩. ಸವಿತಾ ಎಂ., ೨೦೦೧, ಪಿತೃಪ್ರಧಾನದ ಭೀತಿಗಳು ಹಾಗೂ ಸ್ತ್ರೀ ದ್ವೇಷಿಗಳ ದಾಳಿಗಳು ಮಹಿಳೆಯ ಮೇಲಿನ ಕಲ್ಪನೆಗಳು, ಮಾನಸ.

೪. ಕಸ್ತೂರಿ ಟಿ.ಟಿ., ೨೦೦೬, ಮಹಿಳಾ ವರ್ಷಾಚರಣೆಯ ಮಹತ್ವ, ಪ್ರಿಯಾಂಕ.

೫. ಸುಮನ ಸ್ಮೃತಿ, ೨೦೦೭, ಸುಧಾರಣೆಯತ್ತ ಮಹಿಳೆ, ಕರ್ಮವೀರ.

• • •

## ವಕ್ತೃ ವಿವರ

| | | | |
|---|---|---|---|
| ೧. | ಹೆಸರು | : | ಜಾನಕಿ |
| | ವಯಸ್ಸು | : | ೨೦ |
| | ಜಾತಿ | : | ವಾಲ್ಮೀಕಿ |
| | ಶಿಕ್ಷಣ | : | ೧೦ನೇ ತರಗತಿ |
| | ವಾಸಸ್ಥಳ | : | ಹೊಸಪೇಟೆ |
| ೨. | ಹೆಸರು | : | ಕನಕ |
| | ವಯಸ್ಸು | : | ೨೨ |
| | ಜಾತಿ | : | ಬೆಸ್ತರು |
| | ಶಿಕ್ಷಣ | : | ಅನಕ್ಷರಸ್ಥೆ |
| | ವಾಸಸ್ಥಳ | : | ಕಮಲಾಪುರ |
| ೩. | ಹೆಸರು | : | ಪಾರ್ವತಿ |
| | ವಯಸ್ಸು | : | ೨೭ |
| | ಜಾತಿ | : | ವಾಲ್ಮೀಕಿ |
| | ಶಿಕ್ಷಣ | : | ಪಿ.ಯು.ಸಿ. |
| | ವಾಸಸ್ಥಳ | : | ಹೊಸಪೇಟೆ |
| ೪. | ಹೆಸರು | : | ಸಾವಿತ್ರಿ |
| | ವಯಸ್ಸು | : | ೪೦ |
| | ಜಾತಿ | : | ಲಿಂಗಾಯಿತ |

ಶಿಕ್ಷಣ : ೧೦ನೇ ತರಗತಿ

ವಾಸಸ್ಥಳ : ಮರಿಯಮ್ಮನಹಳ್ಳಿ

೫. ಹೆಸರು : ಶಾರದ

ವಯಸ್ಸು : ೩೪

ಜಾತಿ : ಲಿಂಗಾಯಿತ

ಶಿಕ್ಷಣ : ಪಿ.ಯು.ಸಿ.

ವಾಸಸ್ಥಳ : ಡಣಾಪುರ

೬. ಹೆಸರು : ಶಾಂತಿ

ವಯಸ್ಸು : ೩೩

ಜಾತಿ : ಕುರುಬರು

ಶಿಕ್ಷಣ : ಟಿ.ಸಿ.ಎಚ್. (ಶಿಕ್ಷಕಿ)

ವಾಸಸ್ಥಳ : ಹೊಸಪೇಟೆ

೭. ಹೆಸರು : ಅಂಬುಜ

ವಯಸ್ಸು : ೨೭

ಜಾತಿ : ಉಪ್ಪಾರು

ಶಿಕ್ಷಣ : ಅನಕ್ಷರಸ್ಥೆ

ವಾಸಸ್ಥಳ : ಮರಿಯಮ್ಮನಹಳ್ಳಿ

೮. ಹೆಸರು : ಲಕ್ಷ್ಮಿ

ವಯಸ್ಸು : ೩೦

ಜಾತಿ : ವೈಶ್ಯ

ಶಿಕ್ಷಣ : ಪಿ.ಯು.ಸಿ.

ವಾಸಸ್ಥಳ : ಡಣಾಯಕನ ಕೆರೆ

೯. ಹೆಸರು : ರತ್ನಾ

ವಯಸ್ಸು : ೨೬

ಜಾತಿ : ಈಡಿಗರು

ಶಿಕ್ಷಣ : ಅನಕ್ಷರಸ್ಥೆ

ವಾಸಸ್ಥಳ : ಮರಿಯಮ್ಮನಹಳ್ಳಿ

೧೦. ಹೆಸರು : ರಾಧ

ವಯಸ್ಸು : ೨೭

ಜಾತಿ : ಗೌಳಿ

ಶಿಕ್ಷಣ : ಬಿ.ಎ.

ವಾಸಸ್ಥಳ : ಹೊಸಪೇಟೆ

೧೧. ಹೆಸರು : ಮಂಜುಳ

ವಯಸ್ಸು : ೨೯

ಜಾತಿ : ಲಿಂಗಾಯಿತ

ಶಿಕ್ಷಣ : ಬಿ.ಎ.

ವಾಸಸ್ಥಳ : ಹೊಸಪೇಟೆ

೧೨. ಹೆಸರು : ಸುಜಾತ

ವಯಸ್ಸು : ೩೧

ಜಾತಿ : ನಾಯಕ

ಶಿಕ್ಷಣ : ಪಿ.ಯು.ಸಿ.

ವಾಸಸ್ಥಳ : ಮಲಪನಗುಡಿ

೧೩. ಹೆಸರು : ದುರ್ಗಮ್ಮ

ವಯಸ್ಸು : ೨೬

ಜಾತಿ : ವಾಲ್ಮೀಕಿ

ಶಿಕ್ಷಣ : ೭ನೇ ತರಗತಿ

ವಾಸಸ್ಥಳ : ಡಣಾಪುರ

೧೪. ಹೆಸರು : ರೇಣುಕ

ವಯಸ್ಸು : ೨೫

ಜಾತಿ : ಕುರುಬರು

ಶಿಕ್ಷಣ : ೧೦ನೇ ತರಗತಿ

ವಾಸಸ್ಥಳ : ಕಮಲಾಪುರ

೧೫. ಹೆಸರು : ಗಿರಿಜಾ

ವಯಸ್ಸು : ೨೭

ಜಾತಿ : ಲಿಂಗಾಯಿತ

ಶಿಕ್ಷಣ : ಬಿ.ಎ.

ವಾಸಸ್ಥಳ : ಗಾಳೇಮ್ಮನಗುಡಿ

• • •